WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೬ | ಬೆಂಗಳೂರು, ಗುರುವಾರ, ಅಕ್ಟೋಬರ್ ೨೦, ೨೦೧೧ (ಆಶ್ವಯುಜ ೨೮, ಶಕ ವರ್ಷ ೧೯೩೩) | ಸಂಚಿಕೆ ೪೧

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಇ. ಯರ್ರಿಸ್ವಾಮಿ, ಪಿ.ಎಸ್.ಐ. ಅನವಟ್ಟಿ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ ಇವರ ಖಾಯಂ ಪೂರ್ವ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ : 134/ಸಿಬ್ಬಂದಿ–6/05/ಸಿಓಪಿ/2009, ದಿನಾಂಕ : 21–10–2010 ಮತ್ತು 10–11–2010.

**ಪ್ರಸ್ತಾವನೆ :**

ಶ್ರೀ ಇ. ಯರ್ರಿಸ್ವಾಮಿ, ಪಿ.ಎಸ್.ಐ., ಅನವಟ್ಟಿ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ ರವರು ಪಿ.ಎಸ್.ಐ. ಆಗಿ ದಿನಾಂಕ: 1–9–2005 ರಂದು ನೇಮಕಗೊಂಡು, ಬುನಾದಿ ತರಬೇತಿಯಲ್ಲಿ ಉತ್ತೀರ್ಣರಾಗಿರುತ್ತಾರೆ. ಸದರಿಯವರ 2 1/2 ವರ್ಷಗಳ ಖಾಯಂ ಪೂರ್ವ ಅವಧಿಯು ದಿನಾಂಕ : 29–2–2008ಕ್ಕೆ ಪೂರ್ಣಗೊಳ್ಳುತ್ತದೆ. ಆದರೆ, ಈ ಅವಧಿಯಲ್ಲಿ ಅಕೌಂಟ್ಸ್ ಹೈಯರ್ ಇಲಾಖಾ ಪರೀಕ್ಷೆಯಲ್ಲಿ ಉತ್ತೀರ್ಣರಾಗದೆ ಇದ್ದುದರಿಂದ ನೇಮಕಾತಿ ಪ್ರಾಧಿಕಾರಕ್ಕೆ ಒಳಪಟ್ಟಂತೆ ಐಜಿಪಿ, ಪೂರ್ವ ವಲಯ, ದಾವಣಗೆರೆ ರವರು ಕೆ.ಸಿ.ಎಸ್. (ಪ್ರೊಬೇಷನ್) ನಿಯಮಗಳು, 1977ರ ನಿಯಮ 4(1) (ii) ರನ್ವಯ 1 ವರ್ಷ 3 ತಿಂಗಳು ಅಂದರೆ ದಿನಾಂಕ : 1–3–2008 ರಿಂದ 31–5–2009 ರವರೆಗೆ ಖಾಯಂಪೂರ್ವ ಅವಧಿಯನ್ನು ವಿಸ್ತರಿಸಿರುತ್ತಾರೆ. ನಂತರ ಎಸ್.ಪಿ, ಶಿವಮೊಗ್ಗ ಜಿಲ್ಲೆ ರವರು ಆದೇಶ ಸಂಖ್ಯೆ : ಸಿಬ್ಬಂದಿ–5/ಶಿಕ್ಷೆ/21/09, ದಿನಾಂಕ : 3–6–2009ರಲ್ಲಿ ಒಂದು ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡಿರುತ್ತಾರೆ. ಸದರಿ ಚಾಲ್ತಿ ಶಿಕ್ಷೆಯು ದಿನಾಂಕ : 1–9–2010 ಕ್ಕೆ ಪೂರ್ಣಗೊಂಡಿರುತ್ತಾರೆ. ಈ ಅವಧಿಯಲ್ಲಿ ಸದರಿಯವರ ಸೇವೆಯು ತೃಪ್ತಿಕರವಾಗಿದ್ದು ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣೆ) ನಿಯಮಗಳು, 1977ರ ನಿಯಮ 4 ಮತ್ತು 5(1) ರನ್ವಯ ಸದರಿಯವರು ಹೊಂದಿರುವ ಹುದ್ದೆಯ ಕಾರ್ಯಭಾರವನ್ನು ನಿರ್ವಹಿಸಲು ಸಮರ್ಥರಾಗಿರುತ್ತಾರೆ ಎಂದು ವರದಿ ಮಾಡಿದ್ದು, ಸದರಿ ಪಿ.ಎಸ್.ಐ. ರವರ ಖಾಯಂಪೂರ್ವ ಅವಧಿಯ ಕೆ.ಸಿ.ಎಸ್. ನಿಯಮಗಳು, 1977ರ ನಿಯಮ 4(1) (i) ರನ್ವಯ ದಿನಾಂಕ : 31–8–2010 ರವರೆಗೆ ವಿಸ್ತರಿಸುವಂತೆ ಡಿಜಿಪಿ ರವರ ಮೇಲೆ ಓದಲಾದ ಪತ್ರಗಳಲ್ಲಿ ಕೋರಲಾಗಿರುತ್ತದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 301 ಪೊಸಇ 2010, ಬೆಂಗಳೂರು, ದಿನಾಂಕ : 20–7–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಾವಳಿಗಳು, 1977ರ ನಿಯಮ 4(1) (i) ರನ್ವಯ ಶ್ರೀ ಇ. ಯರ್ರಿಸ್ವಾಮಿ, ಪಿ.ಎಸ್.ಐ., ಅನವಟ್ಟಿ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ ರವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ : 1–6–2009 ರಿಂದ 31–8–2010 ರವರೆಗೆ ಅಂತಿಮವಾಗಿ ವಿಸ್ತರಿಸಿ ಸರ್ಕಾರವು ಆದೇಶಿಸಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗದಿಪಡಿಸುವುದು. ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. ನಂ. 1851

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ವೈ.ಕೆ. ಕುಟ್ರೆ, ಎ.ಪಿ.ಸಿ., ಡಿ.ಎ.ಆರ್. ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರ ಆದೇಶ ಸಂಖ್ಯೆ : ಸಿಬ್ಬಂದಿ(2)/ಇವಿ/16/2006 (ಓ.ಬಿ. ಸಂಖ್ಯೆ 620/2007) ದಿನಾಂಕ : 19–6–07.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ : ಅಪೀಲು/172/ಉವ/2007, ದಿನಾಂಕ : 15–12–2007.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 3–3–2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/89/2009–10, ದಿನಾಂಕ : 12–5–2011.

**ಪ್ರಸ್ತಾವನೆ :**

ಶ್ರೀ ವೈ.ಕೆ. ಕುಟ್ರೆ, ಎ.ಪಿ.ಸಿ., ಸಿ.ಎ.ಆರ್., ಬೆಳಗಾವಿ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಘೋರ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇನ್ನೊರ್ವ ಸಿಬ್ಬಂದಿಯೊಂದಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರ ರೊಂದಿಗೆ 8ರಡಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

1. ದಿನಾಂಕ : 11–8–2006 ರಂದು ಶಿಕ್ಷಾ ಬಂದಿ ಖೈದಿ ಸಂ. 00072 ಯಲ್ಲಪ್ಪ ಕುರುಬರ ಸಾ: ಹಾನಗಲ ಈತನನ್ನು ಹುನಗುಂದದ ಸಿಜೆಎಮ್ ಮತ್ತು ಜೆಎಮ್‌ಎಫ್‌ಸಿ ನ್ಯಾಯಾಲಯಕ್ಕೆ ಹಾಜರಪಡಿಸಿ ಅಲ್ಲಿಂದ ಕರೆದುಕೊಂಡು ಬರುವಾಗ ನೇರವಾಗಿ ಅವನಿಗೆ ಹುನಗುಂದದಿಂದ ಬೆಳಗಾವಿಗೆ ಕರದುಕೊಂಡು ಬರದೆ, ಹುನಗುಂದದಿಂದ ಇಳಕಲ್, ಇಳಕಲ್‌ನಿಂದ ಹುಬ್ಬಳ್ಳಿ ಹಾಗೂ ಹುಬ್ಬಳ್ಳಿಯಿಂದ ಬೆಳಗಾವಿಗೆ ಕರೆದುಕೊಂಡು ಬಂದು ನೀವು ನಿಮ್ಮ ಬೆಂಗಾವಲು ಕರ್ತವ್ಯದಲ್ಲಿ ಚ್ಯುತಿ ಎಸಗಿರುತ್ತೀರಿ.
2. ಇದು ಅಲ್ಲದೇ, ಹುನಗುಂದದಿಂದ ಸದರಿ ಖೈದಿ ಸಂ. 00072 ಯಲ್ಲಪ್ಪ ಕುರಬರ ಸಾ: ಹಾನಗಲ ಈತನಿಗೆ ಬೆಂಗಾವಲಿನಲ್ಲಿ ಕರೆದುಕೊಂಡು ಬರುವಾಗ ಹುನಗುಂದದಿಂದ ಗದಗವರೆಗೆ ಆತನ ಸಹ ಖೈದಿ ಹಣಮಂತ ಸಾ: ಬಾಗಲಕೋಟ ಈತನಿಗೆ ಸಂಗಡ ಬರಲು ಹಾಗೂ ಅವನ ಮನೆಯವರ ಕಡೆಯಿಂದ ರೂ. 500/– ಹಣ ಪಡೆದುಕೊಳ್ಳಲು ಅನುವು ಮಾಡಿಕೊಟ್ಟು ನೀವು ನಿಮ್ಮ ಬೆಂಗಾವಲು ಕರ್ತವ್ಯದಲ್ಲಿ ನಿಷ್ಕಾಳಜಿತನ ಹಾಗೂ ಬೇಜವಾಬ್ದಾರಿತನವನ್ನು ಪ್ರದರ್ಶಿಸಿರುವಿರಿ.
3. ಸದರ ಶಿಕ್ಷಾಬಂದಿ ಖೈದಿಯನ್ನು ಬೆಂಗಾವಲಿನಲ್ಲಿ ನಿಯಮದ ಮೇರೆಗೆ ಬಸ್ಸಿನಲ್ಲಿ ನಿಮ್ಮ ಪಕ್ಕದಲ್ಲಿ ಕೂಡ್ರಿಸಿಕೊಂಡುಬರದೆ ಇಳಕಲ್‌ದಿಂದ ಹುಬ್ಬಳ್ಳಿಗೆ ಬರುವಾಗ ಶಿಕ್ಷಾಬಂದಿ ಖೈದಿಯನ್ನು ಒಂದು ಸೀಟಿನ ಕೊನೆಯಲ್ಲಿ ಅದೆ ಸೀಟಿನ ಇನ್ನೊಂದು ಕೊನೆಯಲ್ಲಿ ಒಬ್ಬರು ಮತ್ತು ಹಿಂದಿನ ಸೀಟಿನಲ್ಲಿ ಒಬ್ಬರು, ಹೀಗೆ ಆರೋಪಿಯನ್ನು ಬಿಟ್ಟು ಬೇರೆಬೇರೆಯಾಗಿ ಕುಳಿತುಕೊಂಡು ಸದರ ಖೈದಿಗೆ ಆತನ ಮುಂದಿನ ಆಸನದಲ್ಲಿ ಕುಳಿತ ವ್ಯಕ್ತಿಯ ಜೇಬಿನಿಂದ ರೂ. 10,000/–ಗಳನ್ನು ಕಳ್ಳತನ ಮಾಡಲು ಅನುವು ಮಾಡಿಕೊಟ್ಟು, ನಿಮಗೆ ನಿಯೋಜಿಸಿದ ಬೆಂಗಾವಲು ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸದೇ ನಿಮ್ಮ ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ ಹಾಗೂ ಬೇಜವಾಬ್ದಾರಿತನವನ್ನು ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ : 19–6–07ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಎ.ಪಿ.ಸಿ. ಹುದ್ದೆಯ ಕನಿಷ್ಠ ಮೂಲ ವೇತನಕ್ಕೆ ಇಳಿಸಲಾಗಿದೆ. ಹೊಸದಾಗಿ ವೇತನ ಬಡ್ತಿಗಳನ್ನು ಗಳಿಸುವುದು ದಿನಾಂಕ : 24–9–2006 ರಿಂದ 31–3–2007ರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ : 15–12–2007ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 59(1)(ಬಿ) ಗೆ ವ್ಯತಿರಿಕ್ತವಾಗಿರುವುದರಿಂದ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸಿ ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರುವಂತೆ 2 ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ, ದಿನಾಂಕ : 24–9–06 ರಿಂದ 31–3–07ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 41 ಪೊಸಿಅ 2010, ಬೆಂಗಳೂರು, ದಿನಾಂಕ : 19–7–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವೈ.ಕೆ. ಕುಟ್ರೆ, ಎ.ಪಿ.ಸಿ., ಡಿ.ಎ.ಆರ್., ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್. ನಂ. 1852

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ.ಎಂ. ಪ್ರಕಾಶ, ಸಿ.ಪಿ.ಸಿ., ಬೆಟ್ಟದಾಪುರ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ, ಇವರ ಆದೇಶ ಸಂಖ್ಯೆ : ಡಿಇ/02/06–07 (ಓ.ಬಿ. 32/07–08) ದಿನಾಂಕ : 18–04–2007.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ : ಅಪೀಲು (14)/2007–08 ದಿನಾಂಕ : 22–06–2007.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 11–01–2011.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(2)/81/2010–11 ದಿನಾಂಕ : 04–03–2011.

**ಪ್ರಸ್ತಾವನೆ :**

ಶ್ರೀ ಬಿ.ಎಂ.ಪ್ರಕಾಶ, ಇವರು ಹುಣಸೂರು ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕೆಲವು ವ್ಯಕ್ತಿಗಳ ಮೇಲೆ ಹಲ್ಲೆ ಮಾಡಿರುವ ಆರೋಪದ ಮೇಲೆ ಮೊ.ಸಂ. 48/06 ಕಲಂ 143, 147, 448, 341, 324, 323 ರೆ/ವಿ 149 ಐಪಿಸಿ ರಡಿ ಪ್ರಕರಣ ದಾಖಲಾಗಿದ್ದರಿಂದ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

"ಇವರು ದಿನಾಂಕ 02–04–2006 ರಂದು ಶ್ರೀಮತಿ ನಿಂಗರಾಜಮ್ಮ ಮತ್ತು ಇತರರ ಜೊತೆಯಲ್ಲಿ ಶ್ರೀಮತಿ ಮನೋನ್ಮಣಿ ರವರ ಮನೆಗೆ ಹೋಗಿ ಗಲಾಟೆ ಮಾಡಿ ಮನೋನ್ಮಣಿ ಮತ್ತು ಹರೀಶರವರ ಮೇಲೆ ಹಲ್ಲೆ ಮಾಡಿರುವ ಬಗ್ಗೆ ಇವರ ವಿರುದ್ಧ ಹುಣಸೂರು ಪಟ್ಟಣ ಠಾಣೆ ಮೊ.ಸಂ. 48/06 ಕಲಂ 143, 147, 448, 341, 324, 323 ರೆ/ವಿ 149 ಐಪಿಸಿ ಪ್ರಕರಣ ದಾಖಲಾಗಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗು ಜಿಲ್ಲಾ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 18–04–2007ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ, ಇವರ ದಿನಾಂಕ : 04–04–2006 ರಿಂದ 21–05–2006ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 22–06–2007ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸಿ ಇವರನ್ನು ಪುನರ್ ನೇಮಕ ಮಾಡಲಾಗಿದೆ. ಇವರ ವೇತನವನ್ನು ಪಿ.ಸಿ., ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ಮಟ್ಟಕ್ಕೆ 5 ವರ್ಷಗಳ ಅವಧಿಗೆ ಇಳಿಸುವ ದಂಡನೆಯನ್ನು ವಿಧಿಸಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಹಾಗೂ ಕರ್ತವ್ಯದಿಂದ ಹೊರಗುಳಿದ ಅವಧಿಯನ್ನು "ಡೈಸ್‌ನಾನ್" ಎಂದು ಪರಿಗಣಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷ್ಯತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 7 ಪೊಸಿಅ 2011, ಬೆಂಗಳೂರು, ದಿನಾಂಕ : 20–07–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ.ಎಂ. ಪ್ರಕಾಶ, ಸಿ.ಪಿ.ಸಿ., ಬೆಟ್ಟದಾಪುರ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1853

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀಯುತರಾದ ಟಿ.ಸಿ. ಅಪ್ಪಾಜಿ, ಎ.ಎಸ್.ಐ., ಕೆ.ಎಂ.ದೊಡ್ಡಿ ಪೊಲೀಸ್ ಠಾಣೆ ಮತ್ತು ಎಂ.ಪಿ. ಮಂಜುನಾಥ, ಸಿ.ಪಿ.ಸಿ., ಮಂಡ್ಯ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರುಗಳು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ : ಅಪೀಲು(1)04/2008–09 (ಓ.ಬಿ. 14/2010) ದಿನಾಂಕ : 08–07–2010.
2. ಅರ್ಜಿದಾರರುಗಳ ಮೇಲ್ಮನವಿ ಅರ್ಜಿ ದಿನಾಂಕ : 15–10–2010 ಮತ್ತು 08–12–2010.
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(1)04/2008–09 ದಿನಾಂಕ : 19–05–2011.

**ಪ್ರಸ್ತಾವನೆ :**

ಶ್ರೀಯುತರಾದ ಟಿ.ಸಿ. ಅಪ್ಪಾಜಿ, ಎ.ಎಸ್.ಐ., ಹಾಗೂ ಎಂ.ಪಿ. ಮಂಜುನಾಥ, ಸಿ.ಪಿ.ಸಿ. ಇವರುಗಳು ಮಂಡ್ಯ ಜಿಲ್ಲೆ, ಕೆರಗೋಡು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ, ಬೇಜವಾಬ್ದಾರಿತನ ಹಾಗೂ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇನ್ಕ್ವೋರ್ವ ಅಧಿಕಾರಿಯೊಂದಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

**ಶ್ರೀ ಟಿ.ಸಿ. ಅಪ್ಪಾಜಿ, ಎ.ಎಸ್.ಐ., ರವರ ಮೇಲಿನ ಆರೋಪ :**

" ಆ.ಪೊ.ಅ.–2 ಆದ ನೀವು ಕೆರಗೋಡು ಪೊಲೀಸ್ ಠಾಣೆಯಲ್ಲಿ ಸಹಾಯಕ ಆರಕ್ಷಕ ಉಪ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ : 28–08–2007 ರಂದು ಠಾಣೆಯಲ್ಲಿ ಮೊ.ನಂ. 118/08 ಕಲಂ ಹೆಂಗಸು ಕಾಣೆಯಾಗಿದ್ದಾಳೆಂದು ಪ್ರಕರಣ ದಾಖಲಾಗಿದ್ದು, ಸದರಿ ಪ್ರಕರಣದ ಫಿರ್ಯಾದುದಾರರಿಂದ ಪ್ರಕರಣವನ್ನು ದಾಖಲಿಸಲು ಹಣ ವೆಚ್ಚವಾಗುತ್ತದೆ ಎಂದು ಹೇಳಿ 5,000/– ರೂ.ಗಳನ್ನು ಲಂಚವಾಗಿ ಸ್ವೀಕರಿಸಿರುತ್ತೀರಿ. ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾದ ನೀವು ಪ್ರಾಮಾಣಿಕವಾಗಿ ಕರ್ತವ್ಯವನ್ನು ನಿರ್ವಹಿಸದೆ ಅತೀವವಾದ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

**ಶ್ರೀ ಎಂ.ಪಿ. ಮಂಜುನಾಥ, ಸಿ.ಪಿ.ಸಿ., 27 ರವರ ಮೇಲಿನ ಆರೋಪ :**

ಆ.ಪೊ.ಅ.–3 ಆದ ನೀವು ಕೆರಗೋಡು ಪೊಲೀಸ್ ಠಾಣೆಯಲ್ಲಿ ಆ.ಪೊ.ಅ.–1 ರವರ ಜೀಪ್‌ನ ಚಾಲಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ನಿಮ್ಮ ಕರ್ತವ್ಯಕ್ಕೆ ಸಂಬಂಧಪಡದೇ ಇದ್ದರು ಕೂಡ ದಿನಾಂಕ : 28–08–2007 ರಂದು ಠಾಣೆಗೆ ದೂರು ನೀಡಲು ಬಂದಂತಹ ಮೊ.ನಂ. 118/08 ಕಲಂ ಹೆಂಗಸು ಕಾಣೆಯಾಗಿದ್ದಾರೆ ಪ್ರಕರಣದ ಫಿರ್ಯಾದುದಾರರಾದ ಶ್ರೀ ಭಕ್ತೇಶ್ ರವರನ್ನು ಪುಸಲಾಯಿಸಿ ಹಾಗೂ ತಮ್ಮ ಹೆಂಡತಿ ಕಾಣೆಯಾಗಿರುವ ಬಗ್ಗೆ ತಮ್ಮ ಮೇಲೆಯೂ ಸಹ ಕೇಸು ಹಾಕುತ್ತಾರೆಂದು ಬೆದರಿಸಿ, ಪ್ರಕರಣವನ್ನು ದಾಖಲು ಮಾಡಲು ಹಣ ವೆಚ್ಚವಾಗುತ್ತದೆಂದು ತಿಳಿಸಿ ಆ.ಪೊ.ಅ.–2 ರವರಿಗೆ ಅದೇ ದಿನ 5,000/– ರೂ.ಗಳನ್ನು ಲಂಚವಾಗಿ ಕೊಡಿಸಿದ್ದೂ ಅಲ್ಲದೆ, ನಂತರದ ದಿನಗಳಲ್ಲಿ ಸದರಿ ಫಿರ್ಯಾದುದಾರರೊಡನೆ ಸಂಪರ್ಕವನ್ನಿಟ್ಟುಕೊಂಡು ಪ್ರಕರಣವನ್ನು ಪತ್ತೆ ಮಾಡಿಸಿಕೊಡಲು ಆ.ಪೊ.ಅ.–1 ರವರಿಗೆ ಹಣ ನೀಡಬೇಕೆಂದು ತಿಳಿಸಿ ಫಿರ್ಯಾದುದಾರರ ಮೇಲೆ ಒತ್ತಡ ತಂದು ಅವರಿಂದ ಒಟ್ಟು 25,000/– ರೂ.ಗಳನ್ನು 7–8 ಕಂತುಗಳಲ್ಲಿ ಪಡೆದುಕೊಂಡಿದ್ದಿರಿ. ಪುನಃ ಈ ಪ್ರಕರಣದ ಪತ್ತೆಗೆ ಬೆಂಗಳೂರಿಗೆ ಹೋಗಲು ಸರ್ಕಾರಿ ಜೀಪ್‌ನ್ನು ರಿಪೇರಿ ಮಾಡಿಸಬೇಕೆಂದೂ ಹೇಳಿ ಅದಕ್ಕೆ 1000/– ರೂ.ಗಳನ್ನು ಕೊಡಬೇಕೆಂದು ಒತ್ತಾಯಿಸಿ ಹಣವನ್ನು ಪಡೆದಿರುತ್ತೀರಿ ಒಟ್ಟು 31,000/– ರೂ.ಗಳನ್ನು ಶ್ರೀ ಭಕ್ತೇಶ್ ರವರಿಂದ ವಸೂಲಿ ಮಾಡಿ ಕರ್ತವ್ಯದಲ್ಲಿ ಅತೀವ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

ಎಂದು ನಿಮ್ಮಗಳ ಮೇಲೆ ಅತೀವ ದುರ್ನಡತೆ, ಅಶಿಸ್ತು ಮತ್ತು ಕರ್ತವ್ಯಲೋಪ ತೋರ್ಪಡಿಸಿರುತ್ತೀರೆಂದು ದೋಷಾರೋಪಣೆ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗು ಡಿ.ಜಿ ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 08–07–2010ರ ಆದೇಶದಲ್ಲಿ ಶ್ರೀ ಟಿ.ಸಿ. ಅಪ್ಪಾಜಿ, ಎ.ಎಸ್.ಐ., ಮತ್ತು ಶ್ರೀ ಎಂ.ಪಿ. ಮಂಜುನಾಥ, ಸಿ.ಪಿ.ಸಿ. ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಎರಡು ವರ್ಷಗಳ ಕಾಲ ಅವರ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗುವಂತೆ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರುಗಳು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ದುರ್ನಡತೆ ಹಾಗೂ

ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 193 ಪೊಸಿಅ 2010, ಬೆಂಗಳೂರು, ದಿನಾಂಕ : 20–07–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀಯುತರಾದ ಟಿ.ಸಿ. ಅಪ್ಪಾಜಿ, ಎ.ಎಸ್.ಐ., ಕೆ.ಎಂ.ದೊಡ್ಡಿ ಪೊಲೀಸ್ ಠಾಣೆ ಮತ್ತು ಎಂ.ಪಿ. ಮಂಜುನಾಥ, ಸಿ.ಪಿ.ಸಿ., ಮಂಡ್ಯ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರುಗಳು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1854

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಪಿ. ರುದ್ರಮುನಿ, ಆರ್.ಪಿ.ಎಸ್.ಐ. (ನಿವೃತ್ತ) ಅರಸೀಕೆರೆ ರೈಲ್ವೆ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಹಾಗೂ ಡೆಪ್ಯೂಟಿ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್ (ರೈಲ್ವೇಸ್) ಬೆಂಗಳೂರು, ಇವರ ಆದೇಶ ಸಂಖ್ಯೆ : ಡಿಇ–6/2009–10 ದಿನಾಂಕ : 25–11–2009.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ರೈಲ್ವೇಸ್, ಬೆಂಗಳೂರು, ಇವರ ಆದೇಶ ಸಂಖ್ಯೆ : 88/ಐಜಿಪಿ/ರೈ/ಡಿಇ/2009–10 ದಿನಾಂಕ : 07–05–2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ : 07–06–2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು(2)/26/2010–11 ದಿನಾಂಕ : 23–09–2010.

**ಪ್ರಸ್ತಾವನೆ :**

ಶ್ರೀ ಪಿ.ರುದ್ರಮುನಿ, ಇವರು ಅರಸೀಕೆರೆ ರೈಲ್ವೆ ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರತರವಾದ ದುರ್ನಡತೆ, ನಿರ್ಲಕ್ಷ್ಯತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

"ಶ್ರೀ ಪಿ. ರುದ್ರಮುನಿ, ಆರ್.ಪಿ.ಎಸ್.ಐ. ಅರಸೀಕೆರೆ, ರೇ.ಪೊ. ಠಾಣೆ, ರವರೇ ನೀವು ದಿನಾಂಕ : 23–08–2008 ರಂದು ಇಂಟರ್‌ಸಿಟಿ ರೈಲು ಗಾಡಿಯಲ್ಲಿ ಪ್ರಯಾಣಿಸಿದ ಅಂಬಿಕಾ ತಂದೆ ಈರಯ್ಯ ರವರ ಮೊಬೈಲ್ ತಿಪಟೂರು ರೈಲ್ವೆ ನಿಲ್ದಾಣದಲ್ಲಿ ಕಳುವಾಗಿದ್ದು, ಅನುಮಾನಾಸ್ಪದ 4 ಜನ ಪಿಕ್‌ಪಾಕೇಟ್ ಹೆಂಗಸರನ್ನು ಆರ್.ಪಿ.ಸಿ. 628 ದಿನೇಶ ರವರು ಅರಸೀಕೆರೆ ಠಾಣೆಗೆ ಹಾಜರುಪಡಿಸಿದ್ದು, ಸದರಿ ಆರೋಪಿತರನ್ನು ತಪಾಸಣೆ ಮಾಡಿದಾಗ ಅವರ ಬಳಿ ಒಂದು ನೋಕಿಯಾ ಮೊಬೈಲ್ ಮತ್ತು ನಗದು ಹಣ ರೂ. 1000/– ದೊರಕಿದ್ದು, ಸದರಿ ವಿಷಯವನ್ನು ನೀವು ಶಿವಮೊಗ್ಗ ಬಂದೋಬಸ್ತ್‌ನಲ್ಲಿರುವಾಗ ತಿಳಿಸಿದ್ದು, ಹಾಗೂ ಕಲಂ 109 ಸಿ.ಆರ್.ಪಿ.ಸಿ. ಕೇಸು ದಾಖಲು ಮಾಡಲು ತಿಳಿಸಿದ್ದು, ಅದರಂತೆ ಕ್ರಮ ಕೈಕೊಳ್ಳುವಾಗ, ಬಂದೋಬಸ್ತ್ ಮುಗಿಸಿ ಠಾಣೆಗೆ ವಾಪಸ್ಸು ಬಂದು, ಆರೋಪಿತ ಮಹಿಳೆಯರನ್ನು ವಿಚಾರಣೆ ಮಾಡಿ ಅವರಿಂದ ಒಂದು ಮೊಬೈಲ್ ಹಾಗೂ 1000/– ನಗದು ಹಣವನ್ನು ಪಡೆದುಕೊಂಡು ಅವರ ವಿರುದ್ಧ ಕೇಸು ಹಾಕದೆ ಹಾಗೇ ಬಿಟ್ಟು ಕಳಿಸಿರುತ್ತೀರಿ. ಮೊಬೈಲ್ ಕಳೆದುಕೊಂಡ ಕುಮಾರಿ ಅಂಬಿಕಾ ರವರಿಗೆ ಮೊಬೈಲ್ ಹಿಂದಿರುಗಿಸಿ, ಆರೋಪಿಗಳಿಂದ ವಶಪಡಿಸಿಕೊಂಡ 1000/– ನಗದು ಹಣವನ್ನು ನಿಮ್ಮ ಬಳಿಯೆ ಇಟ್ಟುಕೊಂಡು ಹಣ ದುರುಪಯೋಗ ಪಡಿಸಿಕೊಂಡಿರುತ್ತೀರಿ. ಆರೋಪಿತರ ವಿರುದ್ಧ ಯಾವುದೇ ಪ್ರಕರಣ ದಾಖಲಿಸದೆ ಬಿಟ್ಟು ಕಳಿಸಿರುವುದು ನಿಮ್ಮ ಕರ್ತವ್ಯದಲ್ಲಿ ತೀವ್ರತರವಾದ ಲೋಪವೆಸಗಿರುತ್ತೀರಿ. ಹಾಗೂ ಈ ಹಿಂದೆ 2007ರ ಆಗಸ್ಟ್ ತಿಂಗಳಲ್ಲಿ ಕಳ್ಳತನ ಮಾಡುವ 4 ಜನ ಆರೋಪಿಗಳನ್ನು ಆರ್.ಪಿ.ಸಿ. 129 ರವರು ಠಾಣೆಗೆ ತಂದು ಹಾಜರುಪಡಿಸಿದ್ದು, ಆರೋಪಿತರು ಕದ್ದ ಮಾಲನ್ನು ತೋರಿಸುತ್ತೇವೆ ಎಂದರೂ ಅವರ ವಿರುದ್ಧ ಯಾವುದೇ ಕ್ರಮ ತೆಗೆದುಕೊಳ್ಳದೆ ಕಲಂ 109 ಸಿ.ಆರ್.ಪಿ.ಸಿ. ರೀತ್ಯಾ ಪ್ರಕರಣ ದಾಖಲಿಸಿರುತ್ತೀರಿ. ಅಪರಾಧ ಪ್ರಕರಣಗಳನ್ನು ಪತ್ತೆ ಮಾಡುವಲ್ಲಿ ಸಂಪೂರ್ಣ ವಿಫಲರಾಗಿರುತ್ತೀರಿ. ಇದು ನಿಮ್ಮ ಕರ್ತವ್ಯದಲ್ಲಿ ತೀವ್ರತರವಾದ ನಿರ್ಲಕ್ಷ್ಯತನ ಹಾಗೂ ಅತೀವ ಲೋಪವನ್ನು ಪ್ರದರ್ಶಿಸಿರುತ್ತೀರಿ.

2. ಅರಸೀಕೆರೆ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಮಹಿಳಾ ಆರ್.ಪಿ.ಸಿ.–460 ಕುಮಾರಿ ಶ್ವೇತಾ ಹಾಗೂ ಸ್ವೀಪರ್ ಶ್ರೀಮತಿ ರತ್ನಮ್ಮ ರವರು ಕರ್ತವ್ಯದಲ್ಲಿರುವಾಗ ಯಾರು ಇಲ್ಲದ ವೇಳೆಯಲ್ಲಿ ಮೈ–ಕೈ ಮುಟ್ಟುವುದು, ತೋಳನ್ನು ಹಿಡಿದು ಕೆನ್ನೆಯನ್ನು ಚಿವುಟುವುದು, ಬೆನ್ನ ಮೇಲೆ ಕೈಯಿಂದ ಸವರುವುದು, ಮಹಿಳಾ ಸಿಬ್ಬಂದಿಯೊಂದಿಗೆ ಅನುಚಿತವಾಗಿ ಮತ್ತು ಅಸಭ್ಯವಾಗಿ ವರ್ತಿಸುವುದು ಮಹಿಳಾ ಪಿ.ಸಿ.ಗೆ ಉದ್ದೇಶಪೂರ್ವಕವಾಗಿ ರಾತ್ರಿ ಪಾಳಿಗೆ ಹಾಕುವುದು. ಅಪರಾಧ ಸಭೆಯಲ್ಲಿ ಸಾರ್ವಜನಿಕರ ಮತ್ತು ಮಹಿಳೆಯರ ಜೊತೆ ಸೌಜನ್ಯದಿಂದ ವರ್ತಿಸುವಂತೆ ಮೇಲಾಧಿಕಾರಿಗಳು ತಿಳುವಳಿಕೆ ನೀಡಿದ್ದು, ಸೂಚನೆಯನ್ನು ಪಾಲಿಸದೆ ಠಾಣೆಯ ಮಹಿಳಾ ಸಿಬ್ಬಂದಿಯವರಿಗೆ ಲೈಂಗಿಕ ಕಿರುಕುಳ ನೀಡಿ ಅವರ ಜೊತೆ ಅಸಭ್ಯವಾಗಿ ವರ್ತಿಸಿ, ತೀವ್ರತರವಾದ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಇವರ ವಿರುದ್ಧದ ಎರಡು ಆರೋಪಗಳಲ್ಲಿ ಮೊದಲನೆ ಆರೋಪವು ಸಾಬೀತಾಗಿಲ್ಲವೆಂದು ಎರಡನೇ ಆರೋಪವು ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್ (ರೈಲ್ವೇಸ್) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 25–11–2009ರ ಆದೇಶದಲ್ಲಿ ಅರ್ಜಿದಾರರನ್ನು ಇವರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲಾದ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ರೈಲ್ವೇಸ್, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 07–05–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧದ ಮಹಿಳಾ ಸಿಬ್ಬಂದಿಗಳಿಗೆ ಲೈಂಗಿಕ ಕಿರುಕುಳ ನೀಡಿ ಅವರ ಜೊತೆ ಅಸಭ್ಯವಾಗಿ ವರ್ತಿಸಿ ತೀವ್ರತರವಾದ ದುರ್ನಡತೆಯನ್ನು ಪ್ರದರ್ಶಿಸಿರುವ ಆಪಾದನೆಯು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿದೆ. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷ್ಯತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಲು ತೀರ್ಮಾನಿಸಿದೆ ಹಾಗೂ ಶಿಸ್ತು ಪ್ರಾಧಿಕಾರವು ದಿನಾಂಕ : 25–11–2009ರ ಆದೇಶದಲ್ಲಿ ಅರ್ಜಿದಾರರನ್ನು ಕಡ್ಡಾಯ ನಿವೃತ್ತಿಗೊಳಿಸಿರುವುದು ಕ.ನಾ.ಸೇ.ನಿ. ನಿಯಮ 285ರಡಿ ಎಂದು ನಮೂದಿಸಿರುವುದನ್ನು ಗಮನಿಸಲಾಗಿದೆ. ಈ ಎಲ್ಲಾ ಅಂಶಗಳನ್ನು ಪರಿಗಣಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 97 ಪೊಸಿಅ 2010, ಬೆಂಗಳೂರು, ದಿನಾಂಕ : 19–07–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮ 1963ರ ನಿಯಮ 23(1)(ಬಿ)(ii) ರಡಿಯಲ್ಲಿ ಕಡ್ಡಾಯ ನಿವೃತ್ತಿಗೊಳಿಸಿ, ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆಯನ್ನು ಸ್ಥಿರೀಕರಿಸಿ ಶ್ರೀ ಪಿ. ರುದ್ರಮುನಿ, ಆರ್.ಪಿ.ಎಸ್.ಐ. (ನಿವೃತ್ತ) ಅರಸೀಕೆರೆ ರೈಲ್ವೆ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1855

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಪಿ.ವಿ. ಜೈನಾಪುರ, 6ನೇ ಅಪರ ಸರ್ಕಾರಿ ಅಭಿಯೋಜಕರು (ನಿವೃತ್ತ), ಬೆಂಗಳೂರು ನಗರ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247 (ಎ)(1)ರ ಸೌಲಭ್ಯಕ್ಕೆ ಪರಿಗಣಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ–1 ಸಂ : ಲಾ 15 ಪಿಪಿಇ 83, ದಿನಾಂಕ : 05–04–1984.
2. ಸರ್ಕಾರದ ಆದೇಶ ಸಂಖ್ಯೆ : ಲಾ 173 ಪಿಪಿಇ 84, ದಿನಾಂಕ : 04/06–09–1984.
3. ಸದರಿ ಅಧಿಕಾರಿಯವರ ಮನವಿ ದಿನಾಂಕ : 10–07–2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ : ಡಿಪಿಎನ್/ಲೆಕ್ಕ–1/134/2008–09, ದಿನಾಂಕ : 19–08–2008.

**ಪ್ರಸ್ತಾವನೆ :**

ಮೇಲೆ (4)ರಲ್ಲಿ ಓದಲಾದ ದಿನಾಂಕ : 19–08–2008ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರುರವರು ಮೇಲೆ (1)ರಲ್ಲಿ ಓದಲಾದ ದಿನಾಂಕ : 05–04–1984ರ ಸರ್ಕಾರದ ಅಧಿಸೂಚನೆಯ ಕ್ರ.ಸಂ. 4ರ ಅನ್ವಯ ಶ್ರೀ ಪಿ.ವಿ. ಜೈನಾಪುರ, 6ನೇ ಅಪರ ಸರ್ಕಾರಿ ಅಭಿಯೋಜಕರು (ನಿವೃತ್ತ), ಬೆಂಗಳೂರು ನಗರ ಇವರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ : 18–04–1984ರ ಪೂರ್ವಾಹ್ನ ಹುದ್ದೆಯ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಮೇಲೆ (2)ರಲ್ಲಿ ಓದಲಾದ ದಿನಾಂಕ : 04/06–09–1984ರ ಸರ್ಕಾರದ ಆದೇಶದನ್ವಯ ಸದರಿ ನಿವೃತ್ತ ಅಧಿಕಾರಿಯ ಜನ್ಮ ದಿನಾಂಕವನ್ನು 05–03–1951 ಎಂದು ಒಪ್ಪಲಾಗಿದೆ. ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರು 33 ವರ್ಷ 1 ತಿಂಗಳು 13 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1) ರನ್ವಯ ಮೂರು ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಸೌಲಭ್ಯಕ್ಕೆ ಅವರು ಅರ್ಹರಿದ್ದು, ಪರಿಗಣಿಸುವಂತೆ ಕೋರಿರುತ್ತಾರೆ. ಸದರಿ ನಿಯಮಾನುಸಾರ ಶ್ರೀ ಪಿ.ವಿ. ಜೈನಾಪುರ ಇವರ ನಿವೃತ್ತಿ ವೇತನ ಸೌಲಭ್ಯಕ್ಕೆ ಮಾತ್ರ ಮೂರು ವರ್ಷಗಳ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಆದೇಶವನ್ನು ಹೊರಡಿಸುವಂತೆ ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 378 ಪಿಪಿಇ 2008, ಬೆಂಗಳೂರು, ದಿನಾಂಕ : 19–07–2011**

ಮೇಲಿನ ವಿವರಗಳ ಹಿನ್ನೆಲೆಯಲ್ಲಿ, ಶ್ರೀ ಪಿ.ವಿ. ಜೈನಾಪುರ, 6ನೇ ಅಪರ ಸರ್ಕಾರಿ ಅಭಿಯೋಜಕರು (ನಿವೃತ್ತ), ಬೆಂಗಳೂರು ನಗರ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ರೀತ್ಯ ಮೂರು ವರ್ಷಗಳ ಅಧಿಕ ಸೇವಾವಧಿಯನ್ನು ಅವರ ನಿವೃತ್ತಿ ವೇತನ ಸೌಲಭ್ಯಗಳಿಗೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂ : ಆಇ 695 ಸೇ–3/2011, ದಿನಾಂಕ : 20–06–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1856 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬಿ.ಎಂ.ಐ.ಸಿ.ಎ.ಪಿ.ಎ. ಕಛೇರಿಯಲ್ಲಿ ಮಂಜೂರಾಗಿರುವ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ : 27–02–2011ರಿಂದ ಮುಂದುವರೆಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ನಅಇ 149 ಎಂಐಬಿ 2000, ದಿನಾಂಕ : 27–02–2000.
2. ಸರ್ಕಾರದ ಆದೇಶ ಸಂಖ್ಯೆ : ನಅಇ 02 ನಯೋಸೇ 2009, ದಿನಾಂಕ : 10–02–2009.
3. ಸರ್ಕಾರದ ಆದೇಶ ಸಂಖ್ಯೆ : ನಅಇ 110 ನಯೋಸೇ 2010, ದಿನಾಂಕ : 30–07–2010.
4. ಏಕ ಕಡತ ಸಂಖ್ಯೆ : ಬಿಎಂಐಸಿಎಪಿಎ/1/ಕಮುಂ/2011, ದಿನಾಂಕ : 15–02–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಬೆಂಗಳೂರು–ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಸ್ಥಳೀಯ ಯೋಜನಾ ಪ್ರಾಧಿಕಾರಕ್ಕೆ ಒಟ್ಟು 8 ವಿವಿಧ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಿ ಕಾಲಕಾಲಕ್ಕೆ ಮುಂದುವರೆಸುತ್ತಾ, ಓದಲಾದ (2) ಮತ್ತು (3) ರಲ್ಲಿ ಒಂದು ವರ್ಷದವರೆಗೆ ಮುಂದುವರಿಸಲಾಗಿತ್ತು.

ಮುಂದುವರಿದಂತೆ, ಮೇಲೆ ಓದಲಾದ (4)ರ ಏಕ ಕಡತ ಸಂಖ್ಯೆ : ಬಿಎಂಐಸಿಎಪಿಎ/1/ಕಮುಂ/2011, ದಿನಾಂಕ : 15–02–2011ರ ಪ್ರಸ್ತಾವನೆಯಲ್ಲಿ ಸದರಿ ಪ್ರಾಧಿಕಾರವನ್ನು ಕೆ.ಟಿ.ಸಿ.ಪಿ. ಕಾಯ್ದೆಯಡಿಯಲ್ಲಿ ರಚಿಸಿರುವುದರಿಂದ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಅಭಿವೃದ್ಧಿಗಳಿಗೂ ಪ್ರಾಧಿಕಾರದ ಅನುಮೋದನೆ ಪಡೆಯುವುದು ಕಡ್ಡಾಯವಾಗಿರುವುದರಿಂದ ಸದರಿ ಎಲ್ಲಾ 8 ಹುದ್ದೆಗಳನ್ನು 3 ವರ್ಷದ ಅವಧಿಗೆ ಅಥವಾ ಬಿಎಂಐಸಿಎಪಿಎ ದ ಕಾರ್ಯವು ಮುಕ್ತಾಯವಾಗುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ದಿನಾಂಕ : 27–02–2011ರಿಂದ ಮುಂದುವರಿಸುವಂತೆ ಸರ್ಕಾರವನ್ನು ಸದಸ್ಯ ಕಾರ್ಯದರ್ಶಿ, ಬಿಎಂಐಸಿಎಪಿಎ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 34 ನಯೋಸೇ 2011, ಬೆಂಗಳೂರು, ದಿನಾಂಕ : 16–07–2011**

ಸರ್ಕಾರದ ಆದೇಶ ಸಂಖ್ಯೆ : ನಅಇ 286 ಅಪ್ರಾ 2007, ದಿನಾಂಕ : 30–05–2007ರಲ್ಲಿ ಬೆಂಗಳೂರು–ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಸ್ಥಳೀಯ ಯೋಜನಾ ಪ್ರಾಧಿಕಾರ ಹಾಗೂ ಬೆಂಗಳೂರು ವಿಭಾಗದ ನಗರ ಯೋಜನೆಗೆ ಸಂಬಂಧಿಸಿದ ಯೋಜನಾ ಪ್ರಾಧಿಕಾರದ ಕೆಲಸವನ್ನು ನಿರ್ವಹಿಸಲು ತಾತ್ಕಾಲಿಕವಾಗಿ ಮುಂದುವರೆಸಲಾದ ಒಟ್ಟು 8 ವಿವಿಧ ವೃಂದದ ಹುದ್ದೆಗಳನ್ನು ಸದರಿ ಆದೇಶದಲ್ಲಿ ನಮೂದಿಸಲಾದ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ದಿನಾಂಕ : 27–02–2011 ರಿಂದ ಪುನಃ ಒಂದು ವರ್ಷದ ಅವಧಿಗೆ ಅಥವಾ ಬೆಂಗಳೂರು–ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಸ್ಥಳೀಯ ಯೋಜನಾ ಪ್ರಾಧಿಕಾರ ಕಾರ್ಯ ಮುಕ್ತಾಯವಾಗುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1857 ನಗರಾಭಿವೃದ್ಧಿ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಬೆಂಗಳೂರು ದಕ್ಷಿಣ ವಿಧಾನ ಸಭಾ ಕ್ಷೇತ್ರದ ಜಾಗೃತ ಸಮಿತಿಯ ಅಧ್ಯಕ್ಷರನ್ನು ನಾಮನಿರ್ದೇಶಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಗ್ರಾ.ಅಪ. 16/ಯೋಉಮಾ/2010 ದಿನಾಂಕ 18–01–2010.
2. ಮಾನ್ಯ ಸಚಿವರು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರ ಟಿಪ್ಪಣಿ ಸಂಖ್ಯೆ: ಗ್ರಾಅಪರಾ/ಆ/ಕಾ/2699/2011 ದಿನಾಂಕ 28–06–2011.
3. ಮಾನ್ಯ ಶಾಸಕರು ಬೆಂಗಳೂರು ದಕ್ಷಿಣ ಕ್ಷೇತ್ರ ರವರು ಮಾನ್ಯ ಸಚಿವರು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರಿಗೆ ಬರೆದಿರುವ ಪತ್ರ ದಿನಾಂಕ 25–06–2011.

**ಪ್ರಸ್ತಾವನೆ :**

ಪಂಚಾಯತ್ ರಾಜ್ ಸಂಸ್ಥೆಗಳಿಂದ ಅನುಷ್ಠಾನಗೊಳ್ಳುತ್ತಿರುವ ಕಾರ್ಯಕ್ರಮಗಳ ಪರಿಶೀಲನೆ ಮಾಡಲು ಉಲ್ಲೇಖ (1)ರ ಆದೇಶದ ಮೂಲಕ ವಿಧಾನ ಸಭಾ ಕ್ಷೇತ್ರವಾರು ಜಾಗೃತ ಸಮಿತಿಯನ್ನು ರಚಿಸಲಾಗಿದೆ. ಬೆಂಗಳೂರು ದಕ್ಷಿಣ ವಿಧಾನ ಸಭಾ ಕ್ಷೇತ್ರವಾರು ಜಾಗೃತ ಸಮಿತಿಗೆ ಹಾಲಿ ಅಧ್ಯಕ್ಷರಾದ ಸ್ಥಳೀಯ ಶಾಸಕರು, ಬೆಂಗಳೂರು ದಕ್ಷಿಣ ಕ್ಷೇತ್ರ ರವರು ಉಲ್ಲೇಖ (3)ರ ಪತ್ರದಲ್ಲಿ ಅವರ ಬದಲಿಗೆ ಶ್ರೀ ವೈ.ಆರ್. ಹರೀಶ್ ಬಿನ್ ಶ್ರೀ ರಾಮಚಂದ್ರರೆಡ್ಡಿ,

ಯಾರಂಡಹಳ್ಳಿ ಗ್ರಾಮ, ಜಿಗಣಿ ಹೋಬಳಿ, ಆನೇಕಲ್ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ ಇವರನ್ನು ಸದರಿ ಸಮಿತಿಗೆ ಅಧ್ಯಕ್ಷರನ್ನಾಗಿ ನಾಮನಿರ್ದೇಶನ ಮಾಡಲು ಕೋರಿದ್ದು, ಇದನ್ನು ಸಚಿವರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರು ಒಪ್ಪಿದ್ದು, ಸನ್ಮಾನ್ಯ ಮುಖ್ಯಮಂತ್ರಿಯವರು ಈ ಕೋರಿಕೆಯನ್ನು ಅನುಮೋದಿಸಿರುತ್ತಾರೆ. ಬೆಂಗಳೂರು ದಕ್ಷಿಣ ವಿಧಾನ ಸಭಾ ಕ್ಷೇತ್ರದ ಜಾಗೃತ ಸಮಿತಿಗೆ ಬದಲಿ ಅಧ್ಯಕ್ಷರನ್ನು ನಾಮನಿರ್ದೇಶಿಸಲು ಸರ್ಕಾರವು ನಿರ್ದೇಶಿಸಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 16 ಯೋಉಮಾ 2010, ಬೆಂಗಳೂರು, ದಿನಾಂಕ : 22–07–2011.**

ಉಲ್ಲೇಖ (1)ರ ಆದೇಶದ ಮೂಲಕ ರಚಿಸಲಾಗಿರುವ ವಿಧಾನ ಸಭಾ ಕ್ಷೇತ್ರವಾರು ಜಾಗೃತ ಸಮಿತಿಗೆ ಸಂಬಂಧಿಸಿದಂತೆ, ಬೆಂಗಳೂರು ದಕ್ಷಿಣ ವಿಧಾನ ಸಭಾ ಕ್ಷೇತ್ರದ ಜಾಗೃತ ಸಮಿತಿಗೆ ಸ್ಥಳೀಯ ಶಾಸಕರ ಬದಲಿಗೆ ಶ್ರೀ ವೈ.ಆರ್. ಹರೀಶ್ ಬಿನ್. ಶ್ರೀ ರಾಮಚಂದ್ರರೆಡ್ಡಿ ಯಾರಂಡಹಳ್ಳಿ ಗ್ರಾಮ, ಜಿಗಣಿ ಹೋಬಳಿ, ಆನೇಕಲ್ ತಾಲ್ಲೂಕು ಬೆಂಗಳೂರು ನಗರ ಜಿಲ್ಲೆ ಇವರನ್ನು ಅಧ್ಯಕ್ಷರನ್ನಾಗಿ ನಾಮನಿರ್ದೇಶಿಸಲಾಗಿದೆ. ಸದರಿ ಆದೇಶವು ತಕ್ಷಣದಿಂದ ಅನ್ವಯಿಸಲಿದ್ದು ಹಾಲಿ ಬೆಂಗಳೂರು ದಕ್ಷಿಣ ವಿಧಾನ ಸಭಾ ಕ್ಷೇತ್ರದ ಶಾಸಕರ ಅವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸ್ವರ್ಣಲತ ಎಂ. ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1860 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ, ಬ.ಬಾಗೇವಾಡಿ ತಾಲ್ಲೂಕು ಮಲಘಾಣ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 02–06–2011ರ ಪತ್ರ ಸಂಖ್ಯೆ: ಮುಇಂ/ಸನೀ(ಉ)/ಭೂಸ್ವಾಪ್ರ/2011–12/2985.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆ, ಬ.ಬಾಗೇವಾಡಿ ತಾಲ್ಲೂಕು ಮಲಘಾಣ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮಲಘಾಣ ಮತ್ತು ಕಲಕುರ್ಕಿ ಗ್ರಾಮಗಳ ಜಮೀನುಗಳಿಗೆ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ 02–06–2011ರ ಪತ್ರದಲ್ಲಿ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

– ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 04–09–1997.
– ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 21–12–1999.

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಪಡೆದ ಭೂಮಾಲೀಕರು ಇನ್ನೂ ಹೆಚ್ಚಿನ ಪರಿಹಾರಕ್ಕಾಗಿ ಬಿಜಾಪುರ ಸಿವಿಲ್ ನ್ಯಾಯಾಲಯದಲ್ಲಿ (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿದ್ದು, ನ್ಯಾಯಾಲಯವು ಎಲ್.ಎ.ಸಿ. ಸಂಖ್ಯೆ: 147/2000 ರಲ್ಲಿ ಪ್ರತಿ ಎಕರೆಗೆ ರೂ.72,600/–ಗಳನ್ನು, 150/2000 ಮತ್ತು 151/2000ರಲ್ಲಿ ಪ್ರತಿ ಎಕರೆಗೆ ರೂ. 79,000/–ಗಳನ್ನು ನಿಗದಿಪಡಿಸಿದೆ. ಇದಕ್ಕೂ ತೃಪ್ತರಾಗದ ಭೂಮಾಲೀಕರು ಉಚ್ಛ ನ್ಯಾಯಾಲಯದಲ್ಲಿ ಎಂ.ಎಫ್.ಎ. ಸಂಖ್ಯೆ:2444, 2446 ಮತ್ತು 2448/07ನ್ನು ದಾಖಲಿಸಿರುತ್ತಾರೆ. ಉಚ್ಛ ನ್ಯಾಯಾಲಯವು ಪ್ರತಿ ಎಕರೆಗೆ ರೂ. 79,000/– ಗಳಿಂದ ರೂ. 1,14,000/–ಗಳಿಗೆ ಹೆಚ್ಚಿಸಿ ಇತರೆ ಸವಲತ್ತುಗಳೊಂದಿಗೆ ಪಾವತಿಸುವಂತೆ ಆದೇಶಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯು ಪತ್ರ ಸಂಖ್ಯೆ: ಲಾ 805 ಎಲ್.ಬಿ.ಎಸ್ 2010, ದಿನಾಂಕ 21–10–2010, ಲಾ 792 ಎಲ್.ಬಿ.ಎಸ್. 2010, ದಿನಾಂಕ 04–10–2010 ಮತ್ತು ಲಾ 898 ಎಲ್.ಬಿ.ಎಸ್. 2010, ದಿನಾಂಕ 02–12–2010ರ ಪತ್ರಗಳಲ್ಲಿ ಅಭಿಪ್ರಾಯ ನೀಡಿದೆ.

**ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ:**

| ಕ್ರ. ಸಂ. | ಎಲ್ಎಸಿ | ಎಂಎಫ್ಎ | ಗ್ರಾಮ | ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ |
|---|---|---|---|---|---|---|
| 1 | 147/2000 | 2444/07 | ಮಲಘಾಣ | 16/1+2, | 1–37 | 188485 |
| 2 | 150/2000 | 2446/07 | ಕಲಗುರ್ಕಿ | 375/2/3 | 4–12 | 122912 |
| 3 | 151/2000 | 2448/07 | ಕಲಗುರ್ಕಿ | 375/2/1 | 1–13 | 203124 |
| | **ಒಟ್ಟು** | | | | | **514521** |

**ಸರ್ಕಾರದ ಆದೇಶ ಸಂಖ್ಯೆ : ಸನೀಇ 66 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ : 25ನೇ ಜುಲೈ 2011.**

ಬಿಜಾಪುರ ಜಿಲ್ಲೆ, ಬ.ಬಾಗೇವಾಡಿ ತಾಲ್ಲೂಕು ಮಲಘಾಣ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮಲಘಾಣ ಮತ್ತು ಕಲಕುರ್ಕಿ ಗ್ರಾಮಕ್ಕೆ ಸೇರಿದ ವಿವಿಧ ಸರ್ವೆ ನಂಬರ್‌ಗಳ ಜಮೀನುಗಳಿಗೆ ಉಚ್ಛ ನ್ಯಾಯಾಲಯವು ಎಂ.ಎಫ್.ಎ. ಪ್ರಕರಣಗಳಲ್ಲಿ ನೀಡಿರುವ

ತೀರ್ಪಿನಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ. 5,14,521–00 ಗಳನ್ನು (ಐದು ಲಕ್ಷದ ಹದಿನಾಲ್ಕು ಸಾವಿರದ ಐನೂರು ಇಪ್ಪತ್ತೊಂದು ರೂ.ಗಳು ಮಾತ್ರ) ಪಾವತಿಸಲು ಈ ಕೆಳಕಂಡ ಷರತ್ತಿಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ.5,14,521/– ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20–10–2010ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1861

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಐ.ಎ. ಪತ್ತೇಪೂರ, ನಿವೃತ್ತ, ಎ.ಹೆಚ್.ಸಿ., ಡಿ.ಎ.ಆರ್., ಬಿಜಾಪುರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬಿಜಾಪುರ, ಇವರ ಆದೇಶ ಸಂಖ್ಯೆ ಸಿಬ್ಬಂದಿ (3)/ಪಿಆರ್8/2007 ದಿನಾಂಕ 28–02–2009.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಅಪೀಲು/22/ಉವ/2009 ದಿನಾಂಕ 14–12–2009.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 18–10–2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/64/2010–11 ದಿನಾಂಕ 31–03–2011.

**ಪ್ರಸ್ತಾವನೆ :**

ಶ್ರೀ ಐ.ಎ. ಪತ್ತೇಪೂರ, ಇವರು ಜಿಲ್ಲಾ ಸಶಸ್ತ್ರ ಪಡೆ, ಬಿಜಾಪುರದಲ್ಲಿ ಎ.ಹೆಚ್.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಘೋರ ದುರ್ನಡತೆಯನ್ನು ಪ್ರದರ್ಶಿಸಿ ಇಲಾಖೆಯ ಘನತೆಗೆ ಕುಂದುಂಟು ಮಾಡಿರುವುದರಿಂದ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

ದೋಷಾರೋಪಣೆ:

1) ನೀವು ಶ್ರೀ ಐ.ಎ. ಪತ್ತೇಪೂರ, ಎ.ಹೆಚ್.ಸಿ., ಬಕ್ಕಲ್ ನಂಬರ್: 6, ಡಿ.ಎ.ಆರ್., ಬಿಜಾಪುರದಲ್ಲಿ ಸೇವೆ ಸಲ್ಲಿಸುತ್ತಿದ್ದೀರಿ. ನಿಮಗೆ ದಿನಾಂಕ 28–8–2007 ರಂದು ಜಿಲ್ಲಾ ಪೊಲೀಸ್ ಕಛೇರಿಯಲ್ಲಿ ಗಾರ್ಡ್ ಕಮಾಂಡರ್ ಕರ್ತವ್ಯಕ್ಕೆ ನೇಮಿಸಲಾಗಿದ್ದು ನೀವು ಆ ದಿವಸ ಪಹರೆ ಗಾರ್ಡ್ ಪುಸ್ತಕದಲ್ಲಿ ಬೆಳಿಗ್ಗೆ 9 ಗಂಟೆಗೆ ಸಹಿ ಮಾಡಿ ನಂತರ ಹೇಳದೇ ಕೇಳದೇ ಕರ್ತವ್ಯಕ್ಕೆ ಅನಧಿಕೃತವಾಗಿ ಅಮಾನತ್ತಿನ ಆದೇಶ ಜಾರಿಯಾಗುವವರೆಗೂ ಅಂದರೆ ದಿನಾಂಕ 01–10–2007ರ ವರೆಗೆ ಗೈರು ಹಾಜರಾಗಿದ್ದು ಅದೆ.

2) ನೀವು ದಿನಾಂಕ 28–08–2007 ರಂದು ಬೆಳಿಗ್ಗೆ 11–00 ಗಂಟೆಯಿಂದ 12–00 ಗಂಟೆಯ ಅವಧಿಯಲ್ಲಿ ನಿಮ್ಮದು ಬಿಜಾಪುರ ಜಿಲ್ಲಾ ಪೊಲೀಸ್ ಕಛೇರಿಯಲ್ಲಿ ಗಾರ್ಡ್ ಕಮಾಂಡರ್ ಅಂತಾ ಕರ್ತವ್ಯ ಇದ್ದ ಬಗ್ಗೆ ಗೊತ್ತಿದ್ದರೂ ಸಹ ಬಿಜಾಪುರದ ಹಕೀಮ ಚೌಕದ ಹತ್ತಿರ ಸಮವಸ್ತ್ರದಲ್ಲಿ ಅನಾವಶ್ಯಕವಾಗಿ ಇದ್ದು 1) ಭೀಮತಿ ಯದುರಾಯ ಜಯವಾಡಗಿ, ಸಾ: ಮುದನಾಳ ತಾ: ಮುದ್ದೇಬಿಹಾಳ 2) ಬಾಶಾಸಾಬ ಪಿಂಜಾರ. ಸಾ: ಕೈ ತಂಗಡಗಿ ತಾ: ಮುದ್ದೇಬಿಹಾಳ ರವರುಗಳು ಬಿಜಾಪುರದಲ್ಲಿ ಬಸ್‌ಸ್ಟ್ಯಾಂಡ್ ಕಡೆಗೆ ಹೊರಟಿದ್ದ ಆಟೋ ರಿಕ್ಷಾಕ್ಕೆ ಕೈ ಮಾಡಿ ನಿಲ್ಲಿಸಿ ನೀವು ಆಟೋ ರಿಕ್ಷಾದಲ್ಲಿ ಹತ್ತಿ ಕುಳಿತಿದ್ದು ನಂತರ ನೀವು ಸದರ ಭೀಮಶಿಗೆ ಅವರ ಹತ್ತಿರ ಇದ್ದ ಪ್ಲಾಸ್ಟಿಕ್ ಚೀಲದಲ್ಲಿ ಏನಿದೆ ಅಂತಾ ಕೇಳಿ ನಿನಗೆ ಜೈಲಿಗೆ ಕಳಿಹಿಸುತ್ತೀನಿ ಅಂತಾ ಬೆದರಿಸಿ ಅವರ ಕೈಯಲ್ಲಿದ್ದ ರೂ. 60,000–00 ಹಣದ ಪ್ಲಾಸ್ಟಿಕ್ ಚೀಲವನ್ನು ಜೋರಾವರಿಯಿಂದಾ ಕಸಿದುಕೊಂಡು ಸ್ವಲ್ಪ ಮುಂದು ಹೋಗಿ ಸದರ ಭೀಮಶಿಯನ್ನು ಆಟೋ ರಿಕ್ಷಾದಿಂದಾ ಬೆದರಿಸಿ ಕೆಳಗೆ ಇಳಿಸಿ ಈ ರೀತಿ ನೀವು ಒಬ್ಬ ಪೊಲೀಸ್ ಅಧಿಕಾರಿಯಾಗಿ ಹಣ ದೋಚಲು ಇನ್ನಿತರ ಆರೋಪಿತರಾದ 1) ಬಾಶಾಸಾಬ ಪಿಂಜಾರ ಸಾ: ತಂಗಡಗಿ ತಾ: ಮುದ್ದೇಬಿಹಾಳ 2) ದಾದಾಮೀಯಾ ಅಬ್ದುಲ್‌ಖಾದರ ಪಠಾಣ ಸಾ: ಬಾಗಲಕೋಟ ಹಾಗೂ 3) ಇನ್ನೊಬ್ಬನೊಂದಿಗೆ ಕೂಡಿಕೊಂಡು ಹೊಂಚುಹಾಕಿ ಮೋಸ ಮಾಡಿ ಹಣವನ್ನು ದೋಚಿಕೊಂಡು ಹೋಗಿದ್ದು ಅದೆ. ಈ ಬಗ್ಗೆ ನೀವು ಗೋಲಗುಮ್ಮಟ ಪಿ.ಎಸ್. ಬಿಜಾಪುರದಲ್ಲಿ ದಾಖಲಾದ ಸಿಆರ್ ನಂಬರ್ 171/2007 ಕಲಂ

392, 120(ಬಿ), 420 ಸಹ 34 ಐಪಿಸಿ ನೇದ್ದರಲ್ಲಿ ಆರೋಪಿಗಳಾಗಿದ್ದು ಅದೆ. ಈ ಮೂಲಕ ನೀವು ಪೊಲೀಸ್ ಇಲಾಖೆಯಲ್ಲಿ ಇದ್ದುಕೊಂಡು ಘೋರ ದುರ್ನಡತೆಯನ್ನು ಪ್ರದರ್ಶಿಸಿ ಪೊಲೀಸ್ ಇಲಾಖೆಯ ಘನತೆಗೆ ಕುಂದುಂಟು ಮಾಡಿದ್ದು ಅದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬಿಜಾಪುರ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 28–02–2009ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲಾಗಿದೆ ದಿನಾಂಕ: 28–08–2007 ರಿಂದ 10–03–2008ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 14–12–2009ರ ಅದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅತೀವ ನಿರ್ಲಕ್ಷ್ಯತೆ, ಘೋರ ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 162 ಪೊಸಿಅ 2010, ಬೆಂಗಳೂರು, ದಿನಾಂಕ : 25–07–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಐ.ಎ. ಪತ್ತೇಪೂರ, ನಿವೃತ್ತ ಎ.ಹೆಚ್.ಸಿ., ಡಿ.ಎ.ಆರ್., ಬಿಜಾಪುರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1862

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಂ.ಸಿ. ದಶರಥಮೂರ್ತಿ, ಪಿ.ಐ., ಕೇಂದ್ರ ವೃತ್ತ, ದಾವಣಗೆರೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ದಾವಣಗೆರೆ, ಇವರ ಆದೇಶ ಸಂಖ್ಯೆ ಸಿಬ್ಬಂದಿ 5/ಪಿಆರ್/15/2010 (ಓ.ಬಿ. 461/2010) ದಿನಾಂಕ 28–04–2010.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ: 29/ಅಪೀಲು/ಸಿಬ್ಬಂದಿ(2)2010–11 (ಓ.ಬಿ. ಸಂಖ್ಯೆ: 158/2010–11) ದಿನಾಂಕ 09–09–2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 23–11–2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)/94/2010–11 ದಿನಾಂಕ 03–03–2011.

**ಪ್ರಸ್ತಾವನೆ :**

ಶ್ರೀ ಎಂ.ಸಿ. ದಶರಥಮೂರ್ತಿ, ಪಿ.ಐ., ಇವರು ದಾವಣಗೆರೆ ಕೇಂದ್ರ ವೃತ್ತದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಮತ್ತು ಮೇಲಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಮಹಿಳಾ ಪೊಲೀಸ್ ಠಾಣೆಯಲ್ಲಿ ದಾಖಲಾದ ಘೋರ ಅಪರಾಧ ಪ್ರಕರಣಗಳ ಬಗ್ಗೆ ಶೀಘ್ರ ತನಿಖೆ ನಡೆಸುವಲ್ಲಿ ಹಾಗೂ ಸಂಬಂಧಿಸಿದ ಆರೋಪಿಗಳನ್ನು ದಸ್ತಗಿರಿ ಮಾಡಿ ನ್ಯಾಯಾಲಯಕ್ಕೆ ಹಾಜರುಪಡಿಸುವಲ್ಲಿ ತೋರಿದ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ಆರೋಪಗಳು."

ನೀವು ದಾವಣಗೆರೆ ಕೇಂದ್ರ ವೃತ್ತ ನಿರೀಕ್ಷಕರಾಗಿ ಕಾರ್ಯ ನಿರ್ವಹಿಸುತ್ತಿದ್ದು, ಈ ಕಚೇರಿಯಲ್ಲಿ ನಡೆದ ಎಲ್ಲಾ ಮಾಸಿಕ ಅಪರಾಧ ಸಭೆಗಳಲ್ಲಿ ಪ್ರಕರಣಗಳ ತನಿಖೆ ಮತ್ತು ಆರೋಪಿಗಳನ್ನು ದಸ್ತಗಿರಿ ಮಾಡುವ ಬಗ್ಗೆ ಸಲಹೆ, ಸೂಚನೆಗಳನ್ನು ನೀಡಲಾಗಿದ್ದು, ನಿಮ್ಮ ಮೇಲಧಿಕಾರಿಗಳ ಆದೇಶಗಳನ್ನು ಚಾಚೂ ತಪ್ಪದೇ ಪಾಲಿಸುವುದು ಮತ್ತು ಇಲಾಖೆಯ ನಿಯಮಾವಳಿಗಳಿಗೆ ಬದ್ಧರಾಗಿದ್ದುಕೊಂಡು ಅವುಗಳ ಚೌಕಟ್ಟಿನಲ್ಲಿಯೇ ಕರ್ತವ್ಯ ನಿರ್ವಹಿಸುವುದು

ನಿಮ್ಮ ಆದ್ಯ ಕರ್ತವ್ಯವಾಗಿರುತ್ತದೆ. ಆದರೂ ಸಹ ನೀವು ಕ್ರಮವಾಗಿ ದಿನಾಂಕ: 24–11–2009 ಮತ್ತು 17–01–2010 ರಂದು ದಾಖಲಾದ ಮಹಿಳಾ ಪೊಲೀಸ್ ಠಾಣೆ ಗುನ್ನೆ ನಂ: 44/2009 ಮತ್ತು 04/2010 ಕಲಂ 498(ಎ), 506 ಐಪಿಸಿ ಮತ್ತು 3 ಮತ್ತು 4 ಡಿ.ಪಿ. ಆಕ್ಟ್, 1961 ರೀತ್ಯದ ಘೋರ ಅಪರಾಧ ಪ್ರಕರಣದಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು ಶೀಘ್ರವಾಗಿ ತನಿಖೆ ನಡೆಸಿ ಸಂಬಂಧಪಟ್ಟ ಆರೋಪಿಗಳನ್ನು ದಸ್ತಗಿರಿ ಮಾಡಿ ನ್ಯಾಯಾಲಯಕ್ಕೆ ಹಾಜರುಪಡಿಸದೆ, ಆರೋಪಿಗಳು ನ್ಯಾಯಾಲಯದಲ್ಲಿ ನಿರೀಕ್ಷಣಾ ಜಾಮೀನು ಪಡೆಯಲು ಅನುಕೂಲವಾಗುವಂತೆ ವರ್ತಿಸಿ ಆರೋಪಿಗಳನ್ನು ದಸ್ತಗಿರಿ ಮಾಡುವ ಕರ್ತವ್ಯದಲ್ಲಿ ನಿರ್ಲಿಪ್ತರಾಗಿದ್ದುಕೊಂಡು ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯತೆಯನ್ನು ಮತ್ತು ಮೇಲಧಿಕಾರಿಗಳ ಆದೇಶಗಳನ್ನು ಉಲ್ಲಂಘಿಸಿ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 28–04–2010ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮೂರು (3) ತಿಂಗಳ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 09–09–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಮೇಲಧಿಕಾರಿಗಳ ಆದೇಶವನ್ನು ಉಲ್ಲಂಘಿಸಿ ದುರ್ನಡತೆಯನ್ನು ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 185 ಪೊಸಿಅ 2010, ಬೆಂಗಳೂರು, ದಿನಾಂಕ : 25–07–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಸಿ. ದಶರಥಮೂರ್ತಿ, ಪಿ.ಐ., ಕೇಂದ್ರ ವೃತ್ತ, ದಾವಣಗೆರೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 1863

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಹೆಚ್.ಡಿ. ನಾಗರಾಜ, ಹೆಚ್.ಸಿ., ಗಂಡಸಿ ಪೊಲೀಸ್ ಠಾಣೆ, ಹಾಸನ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಇವರ ಆದೇಶ ಸಂಖ್ಯೆ : ಸಿಬ್ಬಂದಿ (1)/ಇವಿ/21/2008–09 (ಓ.ಬಿ. 33/2010, ದಿನಾಂಕ 28–6–2010.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ : ಅಪೀಲು (38)/2010–11, (ಓ.ಬಿ. ಸಂಖ್ಯೆ : 41/2010–11) ದಿನಾಂಕ 04–11–2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 28–01–2011.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ : ಅಪೀಲು (2) /87/2010–11, ದಿನಾಂಕ 29–04–2011.

**ಪ್ರಸ್ತಾವನೆ :**

ಶ್ರೀ ಹೆಚ್.ಡಿ. ನಾಗರಾಜ, ಹೆಚ್.ಸಿ., ಇವರು ಗಂಡಸಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ದುರ್ನಡತೆ ಹಾಗೂ ಅಶಿಸ್ತು ಪ್ರದರ್ಶಿಸಿ ಕರ್ತವ್ಯಲೋಪವೆಸಗಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

"ದಿನಾಂಕ 21–01–2009 ರಂದು ಸುತ್ತೂರು ಜಾತ್ರೆಗೆ ಹೆಚ್.ಡಿ. ನಾಗರಾಜ್, ಸಿ.ಹೆಚ್.ಸಿ. 49, ಗಂಡಸಿ ಪೊಲೀಸ್ ಠಾಣೆ ಹಾಗೂ ಸಿಪಿಸಿ 696 ರವರನ್ನು ಪಿ.ಎಸ್.ಐ., ರವರು ಬಂದೋಬಸ್ತ್ ಕರ್ತವ್ಯಕ್ಕೆ ನೇಮಕ ಮಾಡಿದ್ದಾಗ ಪಿ.ಎಸ್.ಐ. ರವರಿಗೆ ಸೂಳೆ ಮಕ್ಕಳು ನನ್ನ ಹೆಸರನ್ನು ಸೂಚಿಸಿದ್ದು, ಎಂದು ಬೈದು ಏಕವಚನದಲ್ಲಿ ಸೂಳೆ

ಮಕ್ಕಳಾ ಮಾತು ಕೇಳುವುದಿಲ್ಲವೆಂದು ಅವಾಚ್ಯ ಶಬ್ದಗಳಿಂದ ಬೈದು ಠಾಣೆಯ ಹೊರ ಭಾಗಕ್ಕೆ ಬಂದು ಸಾರ್ವಜನಿಕವಾಗಿ ಪಿ.ಎಸ್.ಐ. ರವರಿಗೆ ಮತ್ತು ಠಾಣಾ ಬರಹಗಾರರಿಗೆ ಅವಾಚ್ಯವಾಗಿ ಬೈದು, ಸಮಜಾಯಿಷಿ ಕೇಳಿ ಜ್ಞಾಪನ ನೀಡಿದಾಗ ಜ್ಞಾಪನವನ್ನು ತೆಗೆದುಕೊಳ್ಳದೇ ನಿರಾಕರಿಸಿ ದುರ್ನಡತೆ ಪ್ರದರ್ಶಿಸಿದ್ದು, ದಿನಾಂಕ 13–01–2009 ರಂದು ರಾತ್ರಿ ಸರ್ಕಾರಿ ಕರ್ತವ್ಯಕ್ಕೆ ಕೊಟ್ಟಿರುವ ಗಂಡಸಿ ಠಾಣೆಯ ದೂರವಾಣಿಯನ್ನು ತಮ್ಮ ಸ್ವಂತಕ್ಕೆ ದುರುಪಯೋಗಪಡಿಸಿಕೊಂಡಿದ್ದು ಮೇಲಾಧಿಕಾರಿ ಪಿ.ಎಸ್.ಐ. ರವರೊಡನೆ ದುರ್ನಡತೆಯಿಂದ ಹಾಗೂ ಉದ್ದಟತನದಿಂದ ನಡೆದುಕೊಂಡು ಅಶಿಸ್ತು ಪ್ರದರ್ಶಿಸಿ ಕರ್ತವ್ಯಲೋಪವೆಸಗಿರುತ್ತಾರೆಂದು ಆರೋಪ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆ.ಪೊ.ಅ. ರವರ ವಿರುದ್ಧದ ಪ್ರಮುಖ ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ 28.6.10ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ಎರಡು ವರ್ಷಗಳ ಕಾಲ ಮುಂದೂಡಲಾಗಿದೆ. ದಿನಾಂಕ 05–2–2009 ರಿಂದ 23–3–2009 ರ ವರೆಗಿನ ಅಮಾನತ್ತಿನ ಅವಧಿಯನ್ನು ಜೀವನಾಧಾರ ಭತ್ಯಕ್ಕೆ ಸಮಗೊಳಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ : (2) ರಲ್ಲಿ ಓದಲಾದ ದಿನಾಂಕ 04–11–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 13 ಪೊಸಿಅ 2011, ಬೆಂಗಳೂರು, ದಿನಾಂಕ 22ನೇ ಜುಲೈ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಡಿ. ನಾಗರಾಜ, ಹೆಚ್.ಸಿ., ಗಂಡಸಿ ಪೊಲೀಸ್ ಠಾಣೆ, ಹಾಸನ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ.
(ಪೊಲೀಸ್ ಸೇವೆಗಳು).

ಪಿ.ಆರ್.ನಂ. 1864

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಆರ್. ರಂಗಸ್ವಾಮಯ್ಯ, ಹಿಂದಿನ ತಹಶೀಲ್ದಾರ್, ಚಿಕ್ಕಮಗಳೂರು ತಾಲ್ಲೂಕು ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಕಾರಣ ಕೇಳುವ ನೋಟೀಸು ದಿನಾಂಕ 11–08–2010.
2. ಶ್ರೀ ಆರ್. ರಂಗಸ್ವಾಮಯ್ಯ ಇವರ ಲಿಖಿತ ಹೇಳಿಕೆ ದಿನಾಂಕ 31–08–2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಸಂಖ್ಯೆ (1)ರಲ್ಲಿ, ಶ್ರೀ ಆರ್. ರಂಗಸ್ವಾಮಯ್ಯ, ಹಿಂದಿನ ತಹಶೀಲ್ದಾರ್, ಚಿಕ್ಕಮಗಳೂರು ತಾಲ್ಲೂಕು ಕಛೇರಿಯಲ್ಲಿ ತಹಶೀಲ್ದಾರ್‌ರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಚಿಕ್ಕಮಗಳೂರು ತಾಲ್ಲೂಕು, ಲಕ್ಯಾ ಹೋಬಳಿ, ಹಿರೇಗೌಜ ಗ್ರಾಮದ ಸರ್ವೆ ನಂ. 148/3ಎ1 ರಲ್ಲಿ 2.35 ಎಕರೆ ಖುಷ್ಕಿ ಜಮೀನಿನ ಹದ್ದುಬಸ್ತು ಅಳತೆಗೆ ಸಂಬಂಧಿಸಿದಂತೆ 0.18 ಗುಂಟೆ ಜಮೀನನ್ನು ಬಾಜುದಾರರಾದ ಶ್ರೀ ಹೆಚ್.ಎಸ್. ಶೇಖರಪ್ಪ ಬಿನ್ ಹೆಚ್.ಎ. ಸಿದ್ದೇಗೌಡ ಇವರು ಒತ್ತುವರಿ ಮಾಡಿರುವುದನ್ನು ಮೋಜಿಣಿದಾರರು ಗುರುತಿಸಿರುವಂತೆ ಸದರಿ ಜಾಗವನ್ನು ಅರ್ಜಿದಾರರಾದ ಶ್ರೀ ಸದಾಶಿವ ಬಿನ್ ಪುಟ್ಟಪ್ಪ ಇವರಿಗೆ ಬಿಡಿಸಿ ಕೊಡಲು ಹಿಡುವಳಿ ಜಮೀನಿನ ಒತ್ತುವರಿ ಬಿಡಿಸಲು ಅಧಿಕಾರವಿಲ್ಲದಿದ್ದರೂ ಠಾಣಾಧಿಕಾರಿಗಳು, ಸಕ್ರಾಯಪಟ್ಟಣ ಪೋಲೀಸ್ ಠಾಣೆ ಇವರಿಗೆ ದಿನಾಂಕ 29–04–2008 ರಂದು ಪತ್ರ ಬರೆದು ಕರ್ತವ್ಯ ಲೋಪವೆಸಗಿರುತ್ತೀರೆಂದು ವರದಿ ನೀಡಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರಲ್ಲಿ, ಶ್ರೀ ಆರ್. ರಂಗಸ್ವಾಮಯ್ಯ, ಹಿಂದಿನ ತಹಶೀಲ್ದಾರ್, ಚಿಕ್ಕಮಗಳೂರು ಇವರ ಮನವಿಯಲ್ಲಿ ಅನುಬಂಧ–1–4 ರಲ್ಲಿ ಮಾಡಿರುವ ಆರೋಪಗಳಿಗೆ ಲಿಖಿತ ಉತ್ತರವನ್ನು ನೀಡಿ, ಆರೋಪಗಳನ್ನು ಒಪ್ಪಿಕೊಂಡಿರುತ್ತಾರೆ ಆರೋಪದಿಂದ ದೋಷಮುಕ್ತನಾಗಿ ಮಾಡಬೇಕೆಂದು ಕೋರಿರುತ್ತಾರೆ.

ಮೇಲೆ ವಿವರಿಸಿದಂತೆ ಪ್ರಕರಣದಲ್ಲಿನ ಸತ್ಯಾಸತ್ಯತೆಯನ್ನು ತಿಳಿದುಕೊಂಡು ನಿರ್ಣಯ ತೆಗೆದುಕೊಳ್ಳುವ ಸಲುವಾಗಿ ಶ್ರೀ ಆರ್. ರಂಗಸ್ವಾಮಯ್ಯ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಶ್ರೀ ಸುಭಾಷ್ ಟಿ. ಗೋಗಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ನಂ. 45(ಹಳೆಯ ನಂ. 369, 8ನೇ ಕ್ರಾಸ್, 2ನೇ ಬ್ಲಾಕ್, ಆರ್‌ಎಂವಿ 2ನೇ ಸ್ಟೇಜ್, (60 ಅಡಿ ರಸ್ತೆ) ಬೆಂಗಳೂರು–94. ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಅಪರ ಜಿಲ್ಲಾಧಿಕಾರಿ ಚಿಕ್ಕಮಗಳೂರು ಜಿಲ್ಲೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ತೀರ್ಮಾನಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 556 ಎಎಸ್‌ಡಿ 2009, ಬೆಂಗಳೂರು, ದಿನಾಂಕ 18ನೇ ಜುಲೈ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಆರ್. ರಂಗಸ್ವಾಮಯ್ಯ, ಹಿಂದಿನ ತಹಶೀಲ್ದಾರ್, ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 13ರಡಿಯಲ್ಲಿ ಶ್ರೀ ಸುಭಾಷ್ ಟಿ. ಗೋಗಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ನಂ. 45 (ಹಳೆಯ ನಂ. 369, 8ನೇ ಕ್ರಾಸ್, 2ನೇ ಬ್ಲಾಕ್, ಆರ್‌ಎಂವಿ 2ನೇ ಸ್ಟೇಜ್, (60 ಅಡಿ ರಸ್ತೆ) ಬೆಂಗಳೂರು-94. ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಅಪರ ಜಿಲ್ಲಾಧಿಕಾರಿ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 22 ಸೇಇವಿ 2007 ದಿನಾಂಕ 11-04-2008 ರನ್ವಯ ರೂ.8,000/- (ಎಂಟು ಸಾವಿರ ರೂ.ಗಳು ಮಾತ್ರ) ಗಳ ಸಂಚಿತ ಸಂಭಾವನೆಯನ್ನು ಹಾಗೂ ರೂ. 1,500/- (ಒಂದು ಸಾವಿರ ಐನೂರು ರೂ.ಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್) ಅನ್ನು ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 13 ಮತ್ತು 11 (ಎ) ರಲ್ಲಿನ ವಿಧಿವಿಧಾನವನ್ನು ಅನುಸರಿಸಿ, ಜರುಗಿಸಿ, ವಿಚಾರಣಾ ವರದಿಯನ್ನು ಮೂರು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಗೋಪಾಲಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3).

ಪಿ.ಆರ್.ನಂ. 1865

## ಇಂಧನ ಸಚಿವಾಲಯ

**ವಿಷಯ :** M/S. L.K. Power Corporation Ltd ಇವರ ಪ್ರಾರಂಭವಾಗಿರುವ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಮದ್ದೂರು ಕಿರು ಜಲ ವಿದ್ಯುತ್ ಯೋಜನೆಗೆ ಮಾಡಿಕೊಳ್ಳಲು ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಪಿಡಬ್ಲ್ಯೂಡಿ 148 ಪಿಪಿಸಿ 89, (2) ದಿನಾಂಕ 14-03-1990.
2. ಸರ್ಕಾರಿ ಆದೇಶ ಸಂಖ್ಯೆ : ಇಂಇ 205 ಎನ್‌ಸಿಇ 2002, ದಿನಾಂಕ 28-05-2004.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 144 ಎನ್‌ಸಿಇ 2009, ದಿನಾಂಕ 25-06-2009.
4. ಅಭಿವೃದ್ಧಿದಾರರ ಪತ್ರ ದಿನಾಂಕ 10-7-2010 ಮತ್ತು 04-7-2011.
5. ಸರ್ಕಾರದ ಪತ್ರ ಸಂಖ್ಯೆ ಇಎನ್ 335 ಎನ್‌ಸಿಇ 2010, ದಿನಾಂಕ 06-08-2010 ಮತ್ತು 05.07.2011.
6. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ಎಸ್‌ಹೆಚ್-ಮದ್ದೂರು-ಎಂಹೆಚ್‌ಎಸ್/2011/1994, ದಿನಾಂಕ 07-07-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಲ್ಲಿ ಮೆ॥ ಎಲ್.ಕೆ. ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಗೆ ಈ ಕೆಳಗೆ ವಿವರಿಸಿರುವಂತೆ 2.00 ಮೆ.ವ್ಯಾ. ಸಾಮರ್ಥ್ಯದ ಮದ್ದೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

| ಕಿರು ಜಲ ವಿದ್ಯುತ್ ಯೋಜನೆ ಹೆಸರು | ಸರ್ಕಾರಿ ಆದೇಶ ಸಂಖ್ಯೆ ಮತ್ತು ದಿನಾಂಕ | ಯೋಜನೆಯ ಸ್ಥಳ | ಸಾಮರ್ಥ್ಯ (ಮೆಗಾ ವ್ಯಾಟ್‌ನಲ್ಲಿ) |
|---|---|---|---|
| ಮದ್ದೂರು | ಪಿಡಬ್ಲ್ಯುಡಿ 148 ಪಿಪಿಸಿ 89 (2) ದಿನಾಂಕ 14-3-1990 | ಮಂಡ್ಯ ಜಿಲ್ಲೆಯ ಮಂಡ್ಯ ತಾಲ್ಲೂಕಿನ ಹುಲಿವಾನ ಗ್ರಾಮದ ಮದ್ದೂರು ಬ್ರಾಂಚ್ ಕೆನಾಲ್‌ನ ವಿಶ್ವೇಶ್ವರಯ್ಯ ಕಾಲುವೆಗೆ ಅಡ್ಡಲಾಗಿ | 2.00 |

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಆದೇಶದಲ್ಲಿ ಮೇಲ್ಕಂಡ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆಯಾಗಿ ಬಹಳ ವರ್ಷಗಳು ಕಳೆದಿದ್ದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಅಭಿವೃದ್ಧಿದಾರರು ಪ್ರಗತಿ ಸಾಧಿಸಿರುವುದಿಲ್ಲವೆಂದು ಯೋಜನೆಯ ಹಂಚಿಕೆ ಆದೇಶವನ್ನು ರದ್ದುಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮಸಂಖ್ಯೆ (3)ರ ಆದೇಶದಲ್ಲಿ ಮೆ॥ ಎಲ್.ಕೆ. ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರಿಗೆ ರದ್ದುಪಡಿಸಲಾಗಿರುವ 2.00 ಮೆ.ವ್ಯಾ. ಸಾಮರ್ಥ್ಯದ ಮದ್ದೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಆದೇಶ ಹೊರಡಿಸಿದ ಒಂದು ವರ್ಷದೊಳಗಾಗಿ ಅನುಷ್ಠಾನಗೊಳಿಸಿ ವಿದ್ಯುತ್ ಉತ್ಪಾದನೆ ಪ್ರಾರಂಭಿಸತಕ್ಕದೆಂಬ ಷರತ್ತಿಗೊಳಪಟ್ಟು ಪೂರ್ವಸ್ಥಿತಿಗೆ ತರಲಾಗಿತ್ತು.

ಮೇಲೆ ಓದಲಾದ ಕ್ರಮಸಂಖ್ಯೆ (4)ರ ಪತ್ರಗಳಲ್ಲಿ ಅಭಿವೃದ್ಧಿದಾರರು ಕಾಲಾವಕಾಶವನ್ನು ವಿಸ್ತರಿಸಲು ಕೋರಿರುವ ಹಿನ್ನೆಲೆಯಲ್ಲಿ ಓದಲಾದ ಕ್ರಮ ಸಂಖ್ಯೆ (5)ರ ಪತ್ರಗಳಲ್ಲಿ ಕ್ರೆಡಲ್‌ನ ವ್ಯವಸ್ಥಾಪಕ ನಿರ್ದೇಶಕರ ವರದಿಯನ್ನು ಕೋರಲಾಗಿತ್ತು.

ಓದಲಾದ (6)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ॥ ಎಲ್.ಕೆ. ಪವರ್ ಕಾರ್ಪೋರೇಷನ್ ಲಿಮಿಟೆಡ್, ಇವರ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಮದ್ದೂರು ಕಿರು ಜಲ ವಿದ್ಯುತ್ ಯೋಜನೆಯು ದಿನಾಂಕ 05–04–2011 ರಂದು ಕಮಿಷನ್ ಆಗಿದ್ದು ದಿನಾಂಕ 24–6–2011 ರವರೆಗೆ ಕಾಲಾವಕಾಶ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 335 ಎನ್‌ಸಿಇ 2010, ಬೆಂಗಳೂರು, ದಿನಾಂಕ 26ನೇ ಜುಲೈ 2011**

ಮೆ॥ ಎಲ್.ಕೆ. ಪವರ್ ಕಾರ್ಪೋರೇಷನ್ ಲಿಮಿಟೆಡ್, ಇವರ ಮಂಡ್ಯ ಜಿಲ್ಲೆಯ, ಮಂಡ್ಯ ತಾಲ್ಲೂಕಿನ, ಹುಲಿವಾನ ಗ್ರಾಮದ, ಮದ್ದೂರು ಬ್ರಾಂಚ್ ಕೆನಾಲ್‌ನ ವಿಶ್ವೇಶ್ವರಯ್ಯ ಕಾಲುವೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಪ್ರಾರಂಭವಾಗಿರುವ ಮದ್ದೂರು ಕಿರು ಜಲ ವಿದ್ಯುತ್ ಯೋಜನೆಗೆ ಕಾಲಾವಕಾಶ ಮೀರಿ ಬಳಸಿಕೊಂಡಿರುವ ಹಾಗೂ 15.8.2011 ರವರೆಗಿನ ಅವಧಿಯನ್ನು ಅನುಮೋದಿಸಲಾಗಿದೆ.

ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

ಪಿ.ಆರ್.ನಂ. 1866

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನಲ್ಲಿ ನಡೆಯುತ್ತಿರುವ ಬಾಲಕಿಯರ ವಸತಿ ನಿಲಯವನ್ನು ತುಮಕೂರು ನಗರಕ್ಕೆ ಸ್ಥಳಾಂತರಿಸುವ ಕುರಿತು.

**ಓದಲಾಗಿದೆ :**

1. ಆದೇಶ ಸಂಖ್ಯೆ : ಮಮಇ 72 ಮಭಾಬ 2007, ದಿನಾಂಕ 16–08–2007.
2. ಆದೇಶ ಸಂಖ್ಯೆ : ಮಮಇ 171 ಮಭಾಬ 2007, ದಿನಾಂಕ 22–10–2007.
3. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆರವರ ಪ್ರಸ್ತಾವನೆಯ ಸಂ. ಮಮಅಇ/ಮಕವಿ/ಭಾವನಿ/ಪ್ರವನೆ/07–08/11–12, ದಿನಾಂಕ 27–04–2011 ಮತ್ತು ದಿನಾಂಕ 08.07.2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ 6ನೇ ತರಗತಿಯಿಂದ ನಂತರದ ತರಗತಿಗಳ ಬಾಲಕಿಯರ ವಸತಿ ನಿಲಯಗಳನ್ನು ಹತ್ತು ಜಿಲ್ಲೆಗಳ ತಾಲ್ಲೂಕುಗಳಲ್ಲಿ ಮತ್ತು ಮೆಟ್ರಿಕ್ ನಂತರದ ನಂತರದ ತರಗತಿಗಳ ಬಾಲಕಿಯರ ವಸತಿ ನಿಲಯಗಳನ್ನು 8 ಜಿಲ್ಲೆಗಳ ತಾಲ್ಲೂಕುಗಳಲ್ಲಿ ಪ್ರಾರಂಭಿಸಲು ತಲಾ ಒಂದು ವಸತಿ ನಿಲಯಕ್ಕೆ ಸಂಭವಿಸಬಹುದಾದ ಅಂದಾಜು ವೆಚ್ಚದ ಮಿತಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಆದೇಶದಲ್ಲಿ ವಿದ್ಯಾರ್ಥಿನಿಯರು 6ನೇ ಮತ್ತು ನಂತರದ ತರಗತಿಗಳಲ್ಲಿ ವ್ಯಾಸಂಗವನ್ನು ಮುಂದುವರೆಸಲು ಶಾಂತಿ ನಿಕೇತನ ಎಜುಕೇಷನ್ ಅಂಡ್ ಸೋಷಿಯಲ್ ವೆಲ್‌ಫೇರ್ ಸೊಸೈಟಿ, ತುಮಕೂರು ಇವರು ತುಮಕೂರು ಜಿಲ್ಲೆಯ ಕುಣಿಗಲ್‌ನಲ್ಲಿ 2007–08 ನೇ ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಮಮಇ 72 ಮಭಾಬ 2007, ದಿನಾಂಕ 16–08–2007 ರಲ್ಲಿ ನಿಗದಿಪಡಿಸಿರುವ ಷರತ್ತಿಗೊಳಪಟ್ಟು ಮತ್ತು 50 ವಿದ್ಯಾರ್ಥಿನಿಯರ ನಿರ್ವಹಣೆಗಾಗಿ ಗರಿಷ್ಠ ರೂ. 6,02,500/– ಮೊತ್ತದ ಮಿತಿಗೊಳಪಟ್ಟು ಬಾಲಕಿಯರ ವಸತಿ ನಿಲಯವನ್ನು ಚಾಲ್ತಿಯಲ್ಲಿರುವ ಸೂಚನೆ ಮತ್ತು ಆದೇಶವನ್ನು ಪಾಲಿಸುವ ಷರತ್ತಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (3)ರ ನಿರ್ದೇಶಕರ ಪ್ರಸ್ತಾವನೆಯಲ್ಲಿ, ಶಾಂತಿ ನಿಕೇತನ ಎಜುಕೇಷನ್ ಅಂಡ್ ಸೋಷಿಯಲ್ ವೆಲ್‌ಫೇರ್ ಸೊಸೈಟಿ (ರಿ), ತುಮಕೂರು ಈ ಸಂಸ್ಥೆಯು ಕುಣಿಗಲ್‌ನಲ್ಲಿ ಮೆಟ್ರಿಕ್ ಪೂರ್ವ ಬಾಲಕಿಯರ ವಸತಿ ನಿಲಯವನ್ನು ನಡೆಸುತ್ತಿದ್ದು, ಕುಣಿಗಲ್‌ನಲ್ಲಿ ಸಮಾಜ ಕಲ್ಯಾಣ ಇಲಾಖೆ ಹಾಗೂ ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಇಲಾಖೆಯಿಂದ ಬಾಲಕಿಯರ ವಸತಿ ನಿಲಯಗಳನ್ನು ನಡೆಸುತ್ತಿರುವುದರಿಂದ ಸಂಸ್ಥೆಯು ನಡೆಸುತ್ತಿರುವ ವಸತಿ ನಿಲಯದಲ್ಲಿ ವಿದ್ಯಾರ್ಥಿನಿಯರ ಕೊರತೆಯಿರುತ್ತದೆ. ತುಮಕೂರು ನಗರದಲ್ಲಿ ಮೆಟ್ರಿಕ್ ನಂತರದ ಹೆಚ್ಚಿನ ಶಾಲೆಗಳು, ವೃತ್ತಿ ಶಿಕ್ಷಣ ತರಬೇತಿ ಕೇಂದ್ರಗಳು ಮತ್ತು ಪದವಿ ಪೂರ್ವ ಕಾಲೇಜುಗಳು ಇರುವುದರಿಂದ ವಸತಿ ನಿಲಯವನ್ನು ಕುಣಿಗಲ್‌ನಿಂದ ತುಮಕೂರು ನಗರಕ್ಕೆ ವರ್ಗಾಯಿಸಲು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆರವರು ಶಿಫಾರಸ್ಸು ಮಾಡಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 92 ಮಭಾಬ 2011, ಬೆಂಗಳೂರು, ದಿನಾಂಕ 27ನೇ ಜುಲೈ 2011**

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಶಾಂತಿ ನಿಕೇತನ ಎಜುಕೇಷನ್ ಅಂಡ್ ಸೋಷಿಯಲ್ ವೆಲ್‌ಫೇರ್ ಸೊಸೈಟಿ (ರಿ), ತುಮಕೂರು ಈ ಸಂಸ್ಥೆಯು ಕುಣಿಗಲ್‌ನಲ್ಲಿ ನಡೆಸುತ್ತಿರುವ ಮೆಟ್ರಿಕ್ ಪೂರ್ವ ಬಾಲಕಿಯರ ವಸತಿ ನಿಲಯವನ್ನು ತುಮಕೂರು ನಗರಕ್ಕೆ ಸ್ಥಳಾಂತರಿಸಲು ಅನುಮತಿ ನೀಡಲಾಗಿದೆ.

ಈ ಹಿಂದಿನ ಆದೇಶದಲ್ಲಿ ವಿಧಿಸಿದ್ದ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್,**

ಸರ್ಕಾರದ ಅಧೀನ ಕಾರ್ಯದರ್ಶಿ-1,

ಪಿ.ಆರ್.ನಂ. 1867 ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಕನ್ನಡ ಹಾಗೂ ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

**ವಿಷಯ :** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ಹಾಗೂ ಪರಂಪರೆ ಇಲಾಖೆಗೆ ನಗರ ವಿನ್ಯಾಸಕರು ಮತ್ತು ವಾಸ್ತು ಶಿಲ್ಪ ಸಂರಕ್ಷಕರ ಹುದ್ದೆಗೆ ನೀಡುತ್ತಿರುವ ಸಂಚಿತ ವೇತನವನ್ನು ಹೆಚ್ಚಿಸುವ ಬಗ್ಗೆ ಹಾಗೂ ಬಾಹ್ಯ ಮೂಲದ ಮೂಲಕ ನೇಮಕಾತಿ ಮಾಡಿಕೊಳ್ಳುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಂಕಇ 95 ಕೆಎಂಯು 2004, ದಿನಾಂಕ 26-08-2004.
2. ಸರ್ಕಾರದ ಆದೇಶ ಸಂಖ್ಯೆ : ಸಂಕಇ 219 ಕೆಎಂಯು 2005, ದಿನಾಂಕ 29-10-2005.
3. ಸರ್ಕಾರದ ಆದೇಶ ಸಂಖ್ಯೆ : ಸಂಕಇ 31 ಕೆಎಂಯು 2006, ದಿನಾಂಕ 19-01-2007.
4. ಸರ್ಕಾರದ ಆದೇಶ ಸಂಖ್ಯೆ : ಸಂಕಇ 228 ಕೆಎಂಯು 2010, ದಿನಾಂಕ 15-12-2010.
5. ಆಯುಕ್ತರು ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ರವರ ದಿನಾಂಕ 15.04.2011 ರಂದು ಕೊನೆಗೊಂಡ ಪತ್ರ ಸಂಖ್ಯೆ ಆಪ್ರಾಸಂಪ / ಸಂರಕ್ಷಕರ ಹುದ್ದೆ / 2011-12/19.

**ಪ್ರಸ್ತಾವನೆ :**

ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಗೆ ನಗರ ವಿನ್ಯಾಸಕರು ಮತ್ತು ವಾಸ್ತು ಶಿಲ್ಪ ಸಂರಕ್ಷಕರ ಹುದ್ದೆಗಾಗಿ ತಲಾ ಒಬ್ಬರು ಅಭ್ಯರ್ಥಿಗಳನ್ನು ಬಾಹ್ಯ ಮೂಲದಿಂದ ಮಾಸಿಕ ಸಂಚಿತ ವೇತನದ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲು ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಅನುಮತಿ ನೀಡಲಾಗಿತ್ತು. ಈ ಎರಡೂ ಹುದ್ದೆಗಳನ್ನು ಆಯ್ಕೆ ಮಾಡಿ ಭರ್ತಿ ಮಾಡಿಕೊಳ್ಳಲು ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸಮಿತಿಯನ್ನು ರಚಿಸಲಾಗಿತ್ತು. ಆ ಮೇರೆಗೆ ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ನಗರ ವಿನ್ಯಾಸಕರು ಮತ್ತು ವಾಸ್ತು ಶಿಲ್ಪ ಸಂರಕ್ಷಕರ ಹುದ್ದೆಗೆ ಮಾಸಿಕ ಸಂಚಿತ ವೇತನ ರೂ.16,000/- ಆಧಾರದ ಮೇಲೆ ಬಾಹ್ಯ ಮೂಲದ ಮೂಲಕ ಶ್ರೀ ಹೆಚ್.ಡಿ. ನಾಗೇಶ್, ಮೈಸೂರು ಮತ್ತು ಶ್ರೀ ಜಿ.ಎಸ್.ವಿ. ಸೂರ್ಯನಾರಾಯಣ ಮೂರ್ತಿ, ಹೈದರಾಬಾದ್ ಇವರುಗಳನ್ನು ಷರತ್ತು ನಿಬಂಧನೆಗೊಳಪಟ್ಟು ಮೇಲೆ ಓದಲಾದ (3)ರ ಸರ್ಕಾರಿ ಆದೇಶದಲ್ಲಿ ನೇಮಕಾತಿ ಮಾಡಿಕೊಳ್ಳಲಾಗಿತ್ತು. ತದನಂತರ ಸದರಿ ಹುದ್ದೆಗಳನ್ನು ದಿನಾಂಕ 19-1-2008 ರಿಂದ 19-1-2011 ರವರೆಗೆ ಮೂರು ವರ್ಷಗಳ ಅವಧಿಗೆ ಮೇಲೆ ಓದಲಾದ (4)ರ ಸರ್ಕಾರದ ಆದೇಶದಲ್ಲಿ ಮುಂದುವರೆಸಲಾಗಿತ್ತು. ನಗರ ವಿನ್ಯಾಸಕರು ಮತ್ತು ವಾಸ್ತು ಶಿಲ್ಪ ಸಂರಕ್ಷಕರ ಹುದ್ದೆಗಳಿಗೆ ಬಾಹ್ಯ ಮೂಲದಿಂದ ಸೂಕ್ತ ಅಭ್ಯರ್ಥಿಗಳನ್ನು ನೇಮಕಾತಿ ಮಾಡಿಕೊಳ್ಳಲು ಮತ್ತು ಅವರುಗಳ ಮಾಸಿಕ ಸಂಚಿತ ವೇತನವನ್ನು ರೂ.16,000.00 ರಿಂದ 25,000-00 ಕ್ಕೆ ಹೆಚ್ಚಿಸಲು ಹಾಗೂ ದಿನಾಂಕ 19-01-2011 ರಿಂದ 3 ವರ್ಷ ಅವಧಿಗೆ ಮುಂದುವರಿಸಲು ಮೇಲೆ ಓದಲಾದ (5)ರ ಪತ್ರದಲ್ಲಿ ಆಯುಕ್ತರು ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 228 ಕೆಎಂಯು 2010, ಬೆಂಗಳೂರು, ದಿನಾಂಕ 26ನೇ ಜುಲೈ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಗೆ ಸೃಜಿಸಲಾಗಿರುವ ನಗರ ವಿನ್ಯಾಸಕರು ಮತ್ತು ವಾಸ್ತು ಶಿಲ್ಪ ಸಂರಕ್ಷಕರ ತಲಾ ಒಂದೊಂದು ಹುದ್ದೆಯನ್ನು ದಿನಾಂಕ 19-01-2011 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಿದೆ. ಸದರಿ ಹುದ್ದೆಗಳ ಮಾಸಿಕ ಸಂಚಿತ ವೇತನವನ್ನು ರೂ.16,000.00 ರಿಂದ 20,000-00 ಗಳಿಗೆ ಹೆಚ್ಚಿಸಿದೆ ಹಾಗೂ ಪ್ರಯಾಣ ಭತ್ಯ/ದಿನ ಭತ್ಯ ನೀಡಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲವೆಂದು ಆದೇಶಿಸಿದೆ. ಈ ಹುದ್ದೆಗೆ ಅಭ್ಯರ್ಥಿಗಳನ್ನು ಬಾಹ್ಯ ಮೂಲದಿಂದ ನೇಮಕಾತಿ ಮಾಡಲು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆ.ಇ. 458 ವೆಚ್ಚ-7/2011, ದಿನಾಂಕ 04-07-2011 ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಗೀತಾಕುಮಾರಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್.ನಂ. 1868 ಕನ್ನಡ ಹಾಗೂ ಸಂಸ್ಕೃತಿ ಮತ್ತು ವಾರ್ತಾ ಇಲಾಖೆ.

(ಆಡಳಿತ ಕನ್ನಡ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಸಕ್ಕರೆ ಇಲಾಖೆಯಲ್ಲಿ ಹೆಚ್ಚಿನ ಹೊಸ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ : ಡಿಎಸ್‌ಕೆ/ ಸಿಬ್ಬಂದಿ/7/2010-11, ದಿನಾಂಕ 21-6-2010, 30-9-2010 ಮತ್ತು 22-2-2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ ಸಕ್ಕರೆ ನಿರ್ದೇಶನಾಲಯವು 1973 ರಲ್ಲಿ ಸ್ಥಾಪಿತವಾಗಿದ್ದು. ಆಗ ರಾಜ್ಯದಲ್ಲಿ ಕೇವಲ 16 ಸಕ್ಕರೆ ಕಾರ್ಖಾನೆಗಳು ಮಾತ್ರ ಕಾರ್ಯನಿರ್ವಹಿಸುತ್ತಿದ್ದು, ಸಕ್ಕರೆ ನಿರ್ದೇಶನಾಲಯದ ವೃಂದ ಬಲ ಗ್ರೂಪ್-ಎ ರಿಂದ ಗ್ರೂಪ್-ಡಿ ವರೆಗೆ ಒಟ್ಟು 23 ಹುದ್ದೆಗಳು ಮಾತ್ರ ಸೃಷ್ಟಿಯಾಗಿರುತ್ತದೆ. ನಂತರ 1973 ರಿಂದ 2010 ನೇ ಸಾಲಿನವರೆಗೆ ವಿವಿಧ ಅವಧಿಗಳಲ್ಲಿ ಸಹಕಾರ/ಜಂಟಿ ವಲಯ/ಸಾರ್ವಜನಿಕ ವಲಯ ಹಾಗೂ ಖಾಸಗಿ ವಲಯಗಳಲ್ಲಿ ಒಟ್ಟು 63 ಸಕ್ಕರೆ ಕಾರ್ಖಾನೆಗಳು ಸ್ಥಾಪಿತವಾಗಿದ್ದು, ಸಕ್ಕರೆ ನಿರ್ದೇಶನಾಲಯದಲ್ಲಿ ಮಾತ್ರ ಯಾವುದೇ ಹೊಸ ಹುದ್ದೆಗಳ ಸೃಷ್ಟಿಯಾಗದೇ 63 ಸಕ್ಕರೆ ಕಾರ್ಖಾನೆಗಳ ಕಾರ್ಯಚಟುವಟಿಕೆಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿರುವುದು ವಾಸ್ತವಿಕವಾಗಿ ಕಷ್ಟಸಾಧ್ಯವಾಗಿದೆ. ಪ್ರಸ್ತುತ ಕಬ್ಬು ಅಭಿವೃದ್ಧಿ ಆಯುಕ್ತಾಲಯ ಹಾಗೂ ಸಕ್ಕರೆ ನಿರ್ದೇಶನಾಲಯದ ಕೇಂದ್ರ ಕಛೇರಿ ಬೆಂಗಳೂರಿನಲ್ಲಿ ಮಾತ್ರ ಕಾರ್ಯನಿರ್ವಹಿಸುತ್ತಿದ್ದು, ಇದರ ವಲಯ ಕಛೇರಿಗಳು ಯಾವುದೇ ವಿಭಾಗದ ಮಟ್ಟದಲ್ಲಾಗಲೀ ಅಥವಾ ಜಿಲ್ಲಾ ಮಟ್ಟದಲ್ಲಾಗಲೀ ಇರುವುದಿಲ್ಲ. ಇತ್ತೀಚೆಗೆ ರಾಜ್ಯದ 8-10 ಜಿಲ್ಲೆಗಳಲ್ಲಿ ಕಬ್ಬಿನ ಉತ್ಪಾದನೆ ಅಧಿಕವಾಗಿದ್ದು, ಸುಮಾರು 250 ಲಕ್ಷ ಟನ್ ಸಕ್ಕರೆ ಕಾರ್ಖಾನೆಗಳಲ್ಲಿ ನುರಿಸಲ್ಪಡುತ್ತಿದೆ. ಸಕ್ಕರೆ ಉದ್ಯಮದಿಂದ ವಾರ್ಷಿಕವಾಗಿ ರೂ.10,000/- ಕೋಟಿಗಳ ಬೃಹತ್ ವಹಿವಾಟು ಆಗುತ್ತಿದ್ದು, ಉತ್ಪಾದನೆಯ ಆಧಾರದ ಮೇಲೆ ಕರ್ನಾಟಕವು ರಾಷ್ಟ್ರದಲ್ಲಿ 3ನೇ ಸ್ಥಾನದಲ್ಲಿದೆ. ಆದರೂ ಕರ್ನಾಟಕದಲ್ಲಿ ಕೇಂದ್ರ ಕಛೇರಿ ಮಾತ್ರ ಇದ್ದು, ಜಿಲ್ಲಾ ಮಟ್ಟದಲ್ಲಿ ಬೇರೆ ಇಲಾಖೆಗಳನ್ನು ಅವಲಂಬಿಸಿ ಕೆಲಸ ನಿರ್ವಹಿಸಬೇಕಾಗಿರುವುದರಿಂದ ಸಕ್ಕರೆ ಇಲಾಖೆಯಲ್ಲಿ ಹೊಸ ಕಛೇರಿ/ಹುದ್ದೆಗಳ ಸೃಜನೆಗೆ ಮಂಜೂರಾತಿ ನೀಡಿ ಆದೇಶ ಹೊರಡಿಸುವಂತೆ ಆಯುಕ್ತರು, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರು ಸರ್ಕಾರವನ್ನು ಕೋರಿರುತ್ತಾರೆ.

ಅಲ್ಲದೆ, ಮಾನ್ಯ ಮುಖ್ಯಮಂತ್ರಿಗಳು ತಮ್ಮ 2010-11ರ ಆಯವ್ಯಯ ಭಾಷಣದಲ್ಲಿ ಕಬ್ಬಿನ ಬೆಳೆಯ ಅಭಿವೃದ್ಧಿ ಮತ್ತು ಸಂಸ್ಕರಣೆಗೆ ವ್ಯವಸ್ಥೆ ಮಾಡಲು ಸಕ್ಕರೆ ಇಲಾಖೆಯನ್ನು ಹೆಚ್ಚಿನ ಸಿಬ್ಬಂದಿಯೊಡನೆ ಬಲಪಡಿಸುವುದಾಗಿ ಘೋಷಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 51 ಎಸ್‌ಜಿಎಫ್ 2010, ಬೆಂಗಳೂರು, ದಿನಾಂಕ 28ನೇ ಜುಲೈ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸಕ್ಕರೆ ಇಲಾಖೆಯಲ್ಲಿ ಈ ಕೆಳಕಂಡ ಹುದ್ದೆಗಳ ಸೃಜನೆಗೆ ಸರ್ಕಾರದ ಮಂಜೂರಾತಿ ನೀಡಿದೆ.

| ಕ್ರಮ ಸಂಖ್ಯೆ | ಪದನಾಮ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ (ರೂ.) | ಷರಾ |
|---|---|---|---|---|
| ಅ. ಸಕ್ಕರೆ ನಿರ್ದೇಶನಾಲಯ | | | | |
| 1. | ಜಂಟಿ ನಿರ್ದೇಶಕರು (ಕಬ್ಬು ಅಭಿವೃದ್ಧಿ) | 1 | 20025-28275 | ಕೃಷಿ ಇಲಾಖೆಯಿಂದ ನಿಯೋಜನೆ ಮೇಲೆ |
| 2. | ಜಂಟಿ ನಿರ್ದೇಶಕರು (ಸಕ್ಕರೆ ತಂತ್ರಜ್ಞಾನ) | 1 | 20025-28275 | |
| 3. | ಸಹಾಯಕ ನಿರ್ದೇಶಕರು (ಸಕ್ಕರೆ) | 1 | 11400-21600 | |
| 4. | ಕಛೇರಿ ಅಧೀಕ್ಷಕರು | 1 | 10000-18180 | |
| ಆ. ಕ್ಷೇತ್ರ ಹಂತ | | | | |
| 1. | ಸಹಾಯಕ ಕಬ್ಬು ಅಭಿವೃದ್ಧಿ ಅಧಿಕಾರಿ | 6 | 11400-21600 | (ಬೆಳಗಾಂ, ಚಿಕ್ಕೋಡಿ, ಬಿಜಾಪುರ, ಬಾಗಲಕೋಟೆ, ಬೀದರ್ ಮತ್ತು ಮಂಡ್ಯ) ಕೃಷಿ ಇಲಾಖೆಯಿಂದ ನಿಯೋಜನೆ ಮೇಲೆ ತೆಗೆದುಕೊಳ್ಳುವುದು ಮತ್ತು ಆಯಾ ಜಿಲ್ಲೆಯ ಜಂಟಿ ನಿರ್ದೇಶಕರು (ಕೃಷಿ) ಇವರ ಆಡಳಿತ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುವುದು. |
| 2. | ಪ್ರಥಮ ದರ್ಜೆ ಸಹಾಯಕರು ಅಥವಾ ದ್ವಿತೀಯ ದರ್ಜೆ ಸಹಾಯಕರು | 6 | 7275-13350 (ಪ್ರ.ದ.ಸ.) 5800-10500 (ದ್ವಿ.ದ.ಸ.) | |
| | **ಒಟ್ಟು** | **16** | | |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ/2182/ವೆಚ್ಚ-1/2010, ದಿನಾಂಕ 25-6-2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಿವಶಂಕರ ನಾಯಕ್ ಎಲ್.**
ಪೀಠಾಧಿಕಾರಿ (ಸಕ್ಕರೆ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್.ನಂ. 1869

## ಸಹಕಾರ ಸಚಿವಾಲಯ

**ವಿಷಯ :** 2011-12ನೇ ಸಾಲಿನಲ್ಲಿ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಯೋಜನೆಯ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :** ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಇವರ ಪತ್ರ ಸಂಖ್ಯೆ : ಆರ್‌ಸಿಎಸ್/ಯಶಸ್ವಿನಿ/22/2011-12, ದಿನಾಂಕ 07-06-2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಇವರು 2011-12 ನೇ ಸಾಲಿನ ಅಂದರೆ ಜೂನ್ 2011ರ ಮಾಹೆಯಿಂದ ಯಶಸ್ವಿನಿ ಫಲಾನುಭವಿಗಳು ಯೋಜನೆಯ ಸೌಲಭ್ಯವನ್ನು ಪಡೆಯುತ್ತಿರುವುದರಿಂದ 2011-12ನೇ ಸಾಲಿಗೆ ಯೋಜನೆಯ ಅನುಷ್ಠಾನಕ್ಕಾಗಿ ಆಯವ್ಯಯದಲ್ಲಿ ಕಲ್ಪಿಸಲಾದ ರೂ. 36.00 ಕೋಟಿ ಅನುದಾನದಲ್ಲಿ ಪೈಕಿ ಮೊದಲ ಕಂತಿನ ಹಣ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. 2010-11ನೇ ಸಾಲಿನಲ್ಲಿ ಯೋಜನೆಯಡಿಯಲ್ಲಿ ಮೇ 2011ರ ಅಂತ್ಯಕ್ಕೆ 67,479 ಫಲಾನುಭವಿಗಳಿಗೆ ರೂ.52.33 ಕೋಟಿ ವೆಚ್ಚ ಆಗಿರುತ್ತದೆ. ಆದ್ದರಿಂದ 2010-11ನೇ ಸಾಲಿನಲ್ಲಿ ಯಶಸ್ವಿನಿ ಯೋಜನೆಯಡಿಯಲ್ಲಿ ನೆಟ್‌ವರ್ಕ್ ಆಸ್ಪತ್ರೆಗಳಿಗೆ ಪಾವತಿಸಲು ಬಾಕಿ ಇರುವ ಹಣ ಪಾವತಿಗೆ ಅನುಕೂಲವಾಗುವಂತೆ 2011-12ನೇ ಸಾಲಿನ ಅನುದಾನದ ಪೈಕಿ ರೂ. 10.00 ಕೋಟಿಗಳನ್ನು ಬಿಡುಗಡೆಗೊಳಿಸಲು ತೀರ್ಮಾನಿಸಲಾಗಿರುತ್ತದೆ.

ಆದುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 244 ಸಿಎಲ್‌ಎಸ್ 2011, ಬೆಂಗಳೂರು, ದಿನಾಂಕ 19ನೇ ಜುಲೈ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಯೋಜನೆಯ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಅನುವಾಗುವಂತೆ ರೂ. 10.00 ಕೋಟಿಗಳನ್ನು (ರೂಪಾಯಿ ಹತ್ತು ಕೋಟಿಗಳು ಮಾತ್ರ) ಮೊದಲನೇ ಕಂತಾಗಿ ಲೆಕ್ಕಶೀರ್ಷಿಕೆ **"2425-00-108-0-57 ಯೋಜನೆ – 059 ಇತರೆ ಖರ್ಚು"** ಅಡಿ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ಮೊತ್ತವನ್ನು ಹಣ ಸ್ವೀಕೃತಿ ರಸೀದಿ ಮೇಲೆ ಸಹಕಾರ ಸಂಘಗಳ ನಿಬಂಧಕರ ಮೇಲು ರುಜುವಿನೊಂದಿಗೆ ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಇವರಿಗೆ ಖಜಾನೆಯಿಂದ ಡ್ರಾ ಮಾಡಿ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನಲ್ಲಿರುವ ಯಶಸ್ವಿನಿ ಸಹಕಾರಿ ರೈತರ ಆರೋಗ್ಯ ರಕ್ಷಣಾ ಟ್ರಸ್ಟಿನ ಖಾತೆಗೆ ಜಮಾ ಮಾಡಲು ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 302-ವೆಚ್ಚ-2/2011, ದಿನಾಂಕ 14-07-2011 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ನೂಲಿ,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ.ಆರ್.ನಂ. 1870

## ಸಹಕಾರ ಸಚಿವಾಲಯ

**ವಿಷಯ :** 2010-11ನೇ ವರ್ಷದಲ್ಲಿ ಪತ್ತಿನ ಸಹಕಾರಿ ಸಂಸ್ಥೆಗಳ ಮೂಲಕ ಶೇಕಡಾ 3ರ ಬಡ್ಡಿ ದರದಲ್ಲಿ ಅಲ್ಪಾವಧಿ ಕೃಷಿ ಸಾಲಗಳನ್ನು ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಸಿಒ 69 ಸಿಎಲ್‌ಎಸ್ 2010, ದಿನಾಂಕ 22-04-2010
2. ಸರ್ಕಾರದ ಆದೇಶ ಸಂಖ್ಯೆ: ಸಿಒ 219 ಸಿಎಲ್‌ಎಸ್ 210 (ಭಾ-1) ದಿನಾಂಕ 16-03-2011.
3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಸಿಆರ್‌ಡಿ/03/ಕೆಆರ್‌ಎಫ್/2008-09, ದಿನಾಂಕ 25-01-2011.

**ಪ್ರಸ್ತಾವನೆ :**

ಉಲ್ಲೇಖ (2)ರ ಸರ್ಕಾರಿ ಆದೇಶದ ಮೇರೆಗೆ ಮೂರು ಹಂತಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ಅಲ್ಪಾವಧಿ ಕೃಷಿ ಸಾಲಗಳ ಮೇಲೆ ವಿಧಿಸಬಹುದಾದ ಗರಿಷ್ಠ ಪ್ರಮಾಣದ ಬಡ್ಡಿ ದರಗಳನ್ನು ನಿಗಧಿಪಡಿಸಿ 2009-10ನೇ ಸಾಲಿಗೆ ಸಂಬಂಧಪಟ್ಟಂತೆ ಮಾರ್ಗದರ್ಶಿ ಸೂಚನೆಗಳನ್ನು ತಿದ್ದುಪಡಿ ಮಾಡಿ ಆದೇಶ ಹೊರಡಿಸಲಾಗಿದೆ. ಇದೇ ಪದ್ಧತಿಯನ್ನು 2010-11ನೇ ಸಾಲಿಗೆ ಮುಂದುವರೆಸುವುದು ಯುಕ್ತವೆಂದು ತೀರ್ಮಾನಿಸಲಾಗಿದೆ. ಆದುದರಿಂದ 2010-11ನೇ ಸಾಲಿನಲ್ಲಿ ಪತ್ತಿನ ಸಹಕಾರ ಸಂಸ್ಥೆಗಳ ಮೂಲಕ ಶೇಕಡಾ 3ರ ಬಡ್ಡಿ ದರದಲ್ಲಿ ಅಲ್ಪಾವಧಿ ಕೃಷಿ ಸಾಲಗಳನ್ನು ನೀಡುವ ಬಗ್ಗೆ ಹೊರಡಿಸಲಾದ ಸರ್ಕಾರದ ಉಲ್ಲೇಖ (1)ರ ಆದೇಶದಲ್ಲಿನ ಷರತ್ತು 4 ಅನ್ನು ಬದಲಾಯಿಸಲು ತೀರ್ಮಾನಿಸಲಾಗಿದೆ.

ಅದುದರಿಂದ ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಸಿಒ 219 ಸಿಎಲ್‌ಎಸ್ 2010(ಭಾ-1), ಬೆಂಗಳೂರು, ದಿನಾಂಕ : 20-07-2011**

ಪ್ರಸ್ತಾವನೆಯಲ್ಲಿ ವಿವರಿಸಲಾದ ಪರಿಸ್ಥಿತಿಯಲ್ಲಿ ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿನ ಷರತ್ತು ಸಂಖ್ಯೆ 4 ಅನ್ನು 2010–11ನೇ ವರ್ಷಕ್ಕೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಬದಲಾಯಿಸಿದ್ದು ಅದರಂತೆ ಓದಿಕೊಳ್ಳತಕ್ಕದ್ದು.

"ಈ ಯೋಜನೆಯಡಿ ರೈತರಿಗೆ ಪ್ರಾಥಮಿಕ ಹಂತದಲ್ಲಿ ಪತ್ತಿನ ಸಹಕಾರಿ ಸಂಸ್ಥೆಗಳು ಒದಗಿಸುವ ಸಾಲಗಳ ವಸೂಲಾತಿ ಆಧಾರದ ಮೇಲೆ ನಿಗದಿತ ಪ್ರಮಾಣದ ಬಡ್ಡಿ ಸಹಾಯಧನವನ್ನು ಸರ್ಕಾರವು ಸಂಬಂಧಪಟ್ಟ ಪಟ್ಟಣ ಸಹಕಾರ ಬ್ಯಾಂಕುಗಳಿಗೆ, ಜಿಲ್ಲಾ ಕೇಂದ್ರ ಸಹಕಾರ (ಡಿ.ಸಿ.ಸಿ.) ಬ್ಯಾಂಕುಗಳಿಗೆ ಮತ್ತು ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ (ಕಸ್ಕಾರ್ಡ್) ಬ್ಯಾಂಕಿಗೆ ಒದಗಿಸುತ್ತದೆ."

ಅ) ಮೂರು ಹಂತಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ಈ ಕೆಳಗೆ ಸೂಚಿಸಿದಂತೆ ಮಾತ್ರ ಗರಿಷ್ಠ ಬಡ್ಡಿ ದರಗಳನ್ನು ವಿಧಿಸತಕ್ಕದ್ದು.

i) ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಿಗೆ ನೀಡುತ್ತಿರುವ ಅಲ್ಪಾವಧಿ ಕೃಷಿ ಸಾಲಗಳ ಮೇಲೆ ಶೇ. 4.65ರ ಬಡ್ಡಿ ವಿಧಿಸತಕ್ಕದ್ದು.

ii) ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಗೆ ನೀಡುತ್ತಿರುವ ಅಲ್ಪಾವಧಿ ಕೃಷಿ ಸಾಲಗಳ ಮೇಲೆ ಯಾವುದೇ ಬಡ್ಡಿ ದರಗಳನ್ನು ವಿಧಿಸತಕ್ಕದ್ದಲ್ಲ. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಗೆ ಸರ್ಕಾರಗಳಿಂದ ದೊರೆಯುವ ಬಡ್ಡಿ ಸಹಾಯಧನವನ್ನು ಆಯಾ ಬ್ಯಾಂಕುಗಳು ತಾವು ನೀಡಿದ ಅಲ್ಪಾವಧಿ ಕೃಷಿ ಸಾಲಗಳಿಗೆ ಮಾತ್ರ ಜಮಾ ಪಡೆಯತಕ್ಕದ್ದು.

iii) ಒಂದು ವೇಳೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ತಮ್ಮ ಸಂಪನ್ಮೂಲಗಳನ್ನು ಅಲ್ಪಾವಧಿ ಕೃಷಿ ಸಾಲಗಳಲ್ಲಿ ತೊಡಗಿಸಿದಾಗ ಅಂತಹ ಸಾಲಗಳ ಮೇಲೆ ರಾಜ್ಯ/ಕೇಂದ್ರ ಸರ್ಕಾರಗಳಿಂದ ದೊರೆಯುವ ಬಡ್ಡಿ ಸಹಾಯಧನವನ್ನು ಜಿಲ್ಲಾ ಬ್ಯಾಂಕುಗಳು ಆಯಾ ಸಂಘಗಳಿಗೆ ವರ್ಗಾಯಿಸತಕ್ಕದ್ದು.

iv) ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ತಮ್ಮ ಸದಸ್ಯರಿಗೆ ನೀಡುವ ಅಲ್ಪಾವಧಿ ಕೃಷಿ ಸಾಲಗಳ ಮೇಲೆ ಶೇ. 3ರ ಬಡ್ಡಿದರ ವಿಧಿಸತಕ್ಕದ್ದು.

v) ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ತಾವು ನೀಡುವ ಕೃಷಿ ಅಲ್ಪಾವಧಿ ಸಾಲಗಳ ಮರುಪಾವತಿ ಆಧಾರದ ಮೇಲೆ ರಾಜ್ಯ ಸರ್ಕಾರವು ಗೊತ್ತುಪಡಿಸಿದ ದರದಲ್ಲಿ ಹಾಗೂ ವಿಧಿಸಿದ ನಿಬಂಧನೆಗಳಿಗೊಳಪಟ್ಟು ಬಡ್ಡಿ ಸಹಾಯಧನದ ಬಿಲ್ಲುಗಳನ್ನು ತ್ರೈಮಾಸಿಕವಾಗಿ ತಯಾರಿಸತಕ್ಕದ್ದು.

vi) ತ್ರೈಮಾಸಿಕ ಮುಗಿದ ಒಂದು ತಿಂಗಳೊಳಗಾಗಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಂದ ಬಿಲ್ಲುಗಳನ್ನು ಸಿದ್ಧಪಡಿಸಿ ನಿಬಂಧಕರಿಗೆ ಸಲ್ಲಿಸುವ ಹೊಣೆಯನ್ನು ಡಿಸಿಸಿ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಮತ್ತು ಜಿಲ್ಲೆಯ ಸಹಕಾರ ಸಂಘಗಳ ಉಪ ನಿಬಂಧಕರು ಇವರುಗಳು ವಹಿಸತಕ್ಕದ್ದು.

vii) ಪ್ರಾಥಮಿಕ ಸಂಘಗಳು ಇಂತಹ ಸಾಲಗಳನ್ನು ತಮ್ಮ ಸಂಪನ್ಮೂಲಗಳಿಂದ ನೀಡಿದಾಗ ಅಷ್ಟರಮಟ್ಟಿಗೆ ಜಿಲ್ಲಾ ಬ್ಯಾಂಕುಗಳು ಸರ್ಕಾರದಿಂದ ಪಡೆಯುವ ಬಡ್ಡಿ ಸಹಾಯಧನವನ್ನು ಪ್ರಾಥಮಿಕ ಸಂಘಗಳಿಗೆ ಕಡ್ಡಾಯವಾಗಿ ವರ್ಗಾಯಿಸತಕ್ಕದ್ದು.

viii) ಒಂದು ಪಕ್ಷ ಪ್ರಾಥಮಿಕ ಸಂಘಗಳು ಜಿಲ್ಲಾ ಬ್ಯಾಂಕುಗಳ ಬದಲಾಗಿ ರಾಷ್ಟ್ರೀಕೃತ ಬ್ಯಾಂಕುಗಳಿಂದ ಸಾಲ ಪಡೆದಲ್ಲಿ ಬಡ್ಡಿ ಸಹಾಯಧನ ಹೊಂದಾಣಿಕೆ ವಿಷಯದಲ್ಲಿ ಮೇಲೆ ಸೂಚಿಸಿದ ನಿಯಮಗಳನ್ನೇ ಪಾಲಿಸತಕ್ಕದ್ದು.

ix) ಭಾರತ ಸರ್ಕಾರದಿಂದ ಲಭ್ಯವಾಗುವ ಸವಲತ್ತಿಗೆ ಸಂಬಂಧಪಟ್ಟಂತೆ ಬಡ್ಡಿ ಬಿಲ್ಲುಗಳನ್ನು ತಯಾರಿಸಿ ಸಂಬಂಧಪಟ್ಟ ಪತ್ತಿನ ಸಹಕಾರ ಸಂಘಗಳು/ಬ್ಯಾಂಕುಗಳು ಮಂಜೂರಾತಿಗಾಗಿ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿಗೆ ಸಲ್ಲಿಸಿದ ಪಕ್ಷದಲ್ಲಿ ಮಾತ್ರ ರಾಜ್ಯ ಸರ್ಕಾರದ ಬಡ್ಡಿ ಸಹಾಯಧನ ಬಿಡುಗಡೆ ಮಾಡಲಾಗುವುದು.

x) 2010–11ರಲ್ಲಿ ಜಿಲ್ಲಾ ಬ್ಯಾಂಕುಗಳು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಿಂದ ಬಡ್ಡಿಯನ್ನು ವಸೂಲಿಸಿದ್ದಲ್ಲಿ ಆ ಮೊತ್ತವನ್ನು ತಕ್ಷಣದಲ್ಲಿ ಆಯಾ ಸಂಘಗಳಿಗೆ ಮರುಪಾವತಿಸತಕ್ಕದ್ದು.

ಆ) ಕಸ್ಕಾರ್ಡ್ ಬ್ಯಾಂಕು ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳಿಗೆ ತಾನು ನಿಗದಿಪಡಿಸಿದ ಯುಕ್ತ ಬಡ್ಡಿ ದರದಲ್ಲಿ ಸಾಲ ಒದಗಿಸತಕ್ಕದ್ದು.

ಇ) ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು ಹಾಗೂ ಪಟ್ಟಣ ಸಹಕಾರ ಬ್ಯಾಂಕುಗಳು ಶೇಕಡಾ 3ರ ಬಡ್ಡಿ ದರದಲ್ಲಿ ರೈತರಿಗೆ ಕೃಷಿ/ಕೃಷಿ ಸಂಬಂಧಿತ ಸಾಲಗಳನ್ನು ಒದಗಿಸತಕ್ಕದ್ದು.

ಉಲ್ಲೇಖ (1)ರ ಆದೇಶದಲ್ಲಿ ವಿಧಿಸಿದ ಉಳಿದ ಷರತ್ತುಗಳನ್ನು ಮುಂದುವರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ

ಪಿ.ಆರ್. 1871

## ಸಹಕಾರ ಸಚಿವಾಲಯ

**ವಿಷಯ :** ರಾಜ್ಯದ ರೈತರಿಗೆ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ಶೇಕಡಾ 3ರ ಬಡ್ಡಿ ದರದಲ್ಲಿ ನೀಡಿದ ಸಾಲಗಳ ಪೈಕಿ ವಸೂಲಾಗಿರುವ ಸಾಲಗಳ ಬಡ್ಡಿಯ ವ್ಯತ್ಯಾಸದ ಸಹಾಯಧನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಸಿಇ 96 ಸಿಎಲ್‌ಎಸ್ 2011, ದಿನಾಂಕ 11–05–2011
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಸಿಆರ್‌ಡಿ/4/ಕೆ.ಆರ್.ಎಫ್./2008–09, ದಿನಾಂಕ 28–06–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಸಹಕಾರಿ ಸಂಸ್ಥೆಗಳು ರೈತರಿಗೆ ನೀಡಿದ ಸಾಲಗಳ ಪೈಕಿ ವಸೂಲಾದ ಸಾಲಗಳ ಮೇಲಿನ ಬಡ್ಡಿ, ಸಹಾಯಧನ ಕ್ಲೇಮುಗಳ ಬಾಬ್ತು ರೂ. 7500.00 ಲಕ್ಷಗಳನ್ನು ಮೊದಲನೇ ಕಂತಾಗಿ ಬಿಡುಗಡೆ ಮಾಡಲಾಗಿದೆ. ರೂ. 6673.02 ಲಕ್ಷಗಳು ಬಿಡುಗಡೆಗೆ ಬಾಕಿ ಇದ್ದು ಸಹಕಾರ ಪತ್ತಿನ ಸಂಸ್ಥೆಗಳಿಂದ ರೂ. 1012.40 ಲಕ್ಷಗಳ ಬಿಲ್ಲುಗಳು ಸ್ವೀಕೃತವಾಗಿದ್ದು ಒಟ್ಟಾರೆ ರೂ. 7685.42 ಲಕ್ಷಗಳು ದಿನಾಂಕ 23-06-2011ರ ವರೆಗೆ ಬಾಕಿ ಇದ್ದು ಬಿಡುಗಡೆ ಮಾಡುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಕೋರಿರುತ್ತಾರೆ. ಸದರಿ ಕೋರಿಕೆಯನ್ನು ಪರಿಗಣಿಸಿ ರೂ. 7500.00 ಲಕ್ಷಗಳನ್ನು ಬಿಡುಗಡೆ ಮಾಡಲು ತೀರ್ಮಾನಿಸಲಾಗಿರುತ್ತದೆ.

ಆದುದರಿಂದ, ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 96 ಸಿಎಲ್ಎಸ್ 2011, ಬೆಂಗಳೂರು, ದಿನಾಂಕ : 20-07-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಹಕಾರಿ ಸಂಸ್ಥೆಗಳು ರೈತರಿಗೆ ನೀಡಿದ ಸಾಲಗಳ ಪೈಕಿ ವಸೂಲಾದ ಸಾಲಗಳ ಮೇಲಿನ ಬಡ್ಡಿ ಸಹಾಯಧನದ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಕ್ಲೇಮುಗಳ ಬಾಬ್ತು ಎರಡನೇ ಕಂತು ರೂ. 7500.00 ಲಕ್ಷಗಳನ್ನು (ರೂಪಾಯಿ ಏಳು ಸಾವಿರದ ಐದುನೂರು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2011-12ನೇ ಆಯವ್ಯಯದ ಲೆಕ್ಕಶೀರ್ಷಿಕೆ "2425-00-107-2-41-ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ (ಯೋಜನೆ)" ಅಡಿ ಭರಿಸತಕ್ಕದ್ದು.

| | |
|---|---|
| 2425-00-107-2-41-ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ-106-ಸಹಾಯಧನ | ರೂ. 7413.36 ಲಕ್ಷಗಳು |
| 2425-00-107-2-41-ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ-422-ವಿಶೇಷ ಘಟಕ ಯೋಜನೆ | ರೂ. 22.62 ಲಕ್ಷಗಳು |
| 2425-00-107-2-41-ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ-423-ಗಿರಿಜನ ಉಪಯೋಜನೆ | ರೂ. 64.02 ಲಕ್ಷಗಳು |

ಈ ಹಣವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ/287/ವೆಚ್ಚ-2/2011, ದಿನಾಂಕ 11-07-2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್. ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

ಪಿ.ಆರ್. 1872

**ಸಹಕಾರ ಸಚಿವಾಲಯ**

**ವಿಷಯ :** ಕರ್ನಾಟಕ ಚಿತ್ರಕಲಾ ಪರಿಷತ್ತು (ರಿ), ಕುಮಾರಕೃಪಾ ರಸ್ತೆ, ಬೆಂಗಳೂರು ಈ ಸಂಸ್ಥೆಗೆ ನೇಮಿಸಿರುವ ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**
(1) ಸರ್ಕಾರದ ಆದೇಶ ಸಂಖ್ಯೆ: ಸಇ 10 ಸಸಂನೋ 2009, ದಿನಾಂಕ 10-07-2009
(2) ಸರ್ಕಾರದ ಆದೇಶ ಸಂಖ್ಯೆ: ಸಇ 10 ಸಸಂನೋ 2009, ದಿನಾಂಕ 16-01-2010
(3) ಸರ್ಕಾರದ ಆದೇಶ ಸಂಖ್ಯೆ: ಸಇ 10 ಸಸಂನೋ 2009, ದಿನಾಂಕ 15-07-2010
(4) ಸರ್ಕಾರದ ಆದೇಶ ಸಂಖ್ಯೆ: ಸಇ 10 ಸಸಂನೋ 2009, ದಿನಾಂಕ 07-01-2011
(5) ಆಡಳಿತಾಧಿಕಾರಿಗಳು, ಕರ್ನಾಟಕ ಚಿತ್ರಕಲಾ ಪರಿಷತ್ತು (ರಿ), ಕುಮಾರಕೃಪಾ ರಸ್ತೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಚಿಕಪ/7/2011/837, ದಿನಾಂಕ 01-07-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ರ ಸರ್ಕಾರದ ದಿನಾಂಕ 10-7-2009ರ ಆದೇಶದಲ್ಲಿ ಕರ್ನಾಟಕ ಚಿತ್ರಕಲಾ ಪರಿಷತ್ತು (ರಿ), ಕುಮಾರಕೃಪಾ ರಸ್ತೆ, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 (ಎ) ರನ್ವಯ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ. ಕೆ. ಶಂಕರಲಿಂಗೇಗೌಡ, ಭಾಆಸೇ, ಸರ್ಕಾರದ ಕಾರ್ಯದರ್ಶಿ, ಸಾರಿಗೆ ಇಲಾಖೆ, ಬಹುಮಹಡಿಗಳ ಕಟ್ಟಡ, ಡಾ|| ಬಿ. ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು ಇವರನ್ನು ಆಡಳಿತಾಧಿಕಾರಿಯನ್ನಾಗಿ ಆರು ತಿಂಗಳ ಅವಧಿಗೆ ನೇಮಿಸಿ ಆದೇಶಿಸಲಾಗಿರುತ್ತದೆ. ನಂತರ ಆಡಳಿತಾಧಿಕಾರಿಯವರು ಕೋರಿರುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ: (2) ರಿಂದ (4)ರ ದಿನಾಂಕ 16-1-2010, 15-7-2010 ಮತ್ತು 7-1-2011ರ ಆದೇಶಗಳಲ್ಲಿ ಕರ್ನಾಟಕ ಚಿತ್ರಕಲಾ ಪರಿಷತ್ತು (ರಿ), ಕುಮಾರಕೃಪಾ ರಸ್ತೆ, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆಡಳಿತಾಧಿಕಾರಿಯಾಗಿ ನೇಮಕವಾಗಿರುವ ಶ್ರೀ ಎಂ. ಕೆ. ಶಂಕರಲಿಂಗೇಗೌಡ, ಭಾಆಸೇ, ಸರ್ಕಾರದ ಕಾರ್ಯದರ್ಶಿ, ಸಾರಿಗೆ ಇಲಾಖೆ, ಬಹುಮಹಡಿಗಳ ಕಟ್ಟಡ, ಡಾ|| ಬಿ. ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು ಇವರ ಆಡಳಿತಾಧಿಕಾರಿಯ ಅವಧಿಯನ್ನು ಕ್ರಮವಾಗಿ 10-1-2010 ರಿಂದ 6 ತಿಂಗಳು ಹಾಗೂ ದಿನಾಂಕ 10-7-2010 ರಿಂದ 6 ತಿಂಗಳು ಮತ್ತು 10-1-2011 ರಿಂದ ಆರು ತಿಂಗಳ ಅವಧಿಗೆ ವಿಸ್ತರಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (5)ರ ದಿನಾಂಕ 1-7-2011ರ ಪತ್ರದಲ್ಲಿ, ಆಡಳಿತಾಧಿಕಾರಿಗಳು ಕರ್ನಾಟಕ ಚಿತ್ರಕಲಾ ಪರಿಷತ್ತು, ಕುಮಾರಕೃಪಾ ರಸ್ತೆ, ಬೆಂಗಳೂರು ರವರು ಚಿತ್ರಕಲಾ ಪರಿಷತ್ತಿನ ಬೈಲಾದಲ್ಲಿ ಅನೇಕ ನ್ಯೂನತೆಗಳಿದ್ದು, ಸಮಗ್ರ ತಿದ್ದುಪಡಿಯ ಅಗತ್ಯವಿರುತ್ತದೆ. ಸದರಿ ಸಮಗ್ರ ತಿದ್ದುಪಡಿಗಳನ್ನು ಮಾಡಬೇಕಾದಲ್ಲಿ ಹೆಚ್ಚು ಕಾಲಾವಕಾಶ ಬೇಕಾಗುತ್ತದೆ. ಕಾರಣ ಇತ್ತೀಚಿನ ಸಂಘಗಳ ನೋಂದಣಿಯ ತಿದ್ದುಪಡಿ ಹಾಗೂ ಕಾಲಮಾನಕ್ಕನುಗುಣವಾಗಿ ಸಂಸ್ಥೆಯ ಬೈಲಾ ತಿದ್ದುಪಡಿ ಮಾಡಬೇಕಾಗಿರುತ್ತದೆ. ಹಾಗೆಯೇ ಸಮಗ್ರ ತಿದ್ದುಪಡಿಯನ್ನು ಮಾಡುವ ಮೊದಲು ಸಂಸ್ಥೆಯ

ಸದಸ್ಯರ ಅಭಿಪ್ರಾಯ ಪಡೆದು ನಂತರವೇ ವಾರ್ಷಿಕ ಮಹಾಸಭೆಯನ್ನು ಕರೆದು ಸದರಿ ಸಭೆಯ ತೀರ್ಮಾನದ ನಂತರ ತಿದ್ದುಪಡಿ ಮಾಡಬೇಕಾಗಿರುವುದು ಅನಿವಾರ್ಯವಾಗಿದ್ದು, ಈ ಸಂಬಂಧ ದಿನಾಂಕ 10–6–2011ರ ಚಿತ್ರಕಲಾ ಪರಿಷತ್ ಸಭೆಯಲ್ಲಿ ನಿರ್ಣಯಿಸಿದ್ದು, ಸಮಗ್ರ ತಿದ್ದುಪಡಿಗೆ ಕನಿಷ್ಠ 6 ತಿಂಗಳ ಕಾಲಾವಕಾಶ ಬೇಕೆಂದೂ, ಅಲ್ಲದೇ ಪ್ರಸ್ತುತ ಆಡಳಿತಾಧಿಕಾರಿಗಳಾದ ಶ್ರೀ ಎಂ. ಕೆ. ಶಂಕರಲಿಂಗೇಗೌಡ, ಭಾ.ಆ.ಸೇ. ಹಾಗೂ ಮುಖ್ಯ ಆಡಳಿತಾಧಿಕಾರಿಗಳಾದ ಶ್ರೀ ಸಿ. ಎಸ್. ರುದ್ರಪ್ಪ ಇವರನ್ನು 2 ವರ್ಷ ಮುಂದುವರೆಸಬೇಕೆಂದು ಅಲ್ಲದೇ ಹಿಂದಿನ ಕಹಿ ಘಟನೆಗಳು ಹಾಗೂ ಅವಘಡಗಳ ಹಿನ್ನೆಲೆಯಲ್ಲಿ ಸದ್ಯಕ್ಕೆ ಚುನಾವಣೆ ಬೇಡವೆಂದೂ ಸಭೆಯಲ್ಲಿ ತೀರ್ಮಾನಿಸಲಾಗಿರುತ್ತದೆ.

ರಾಜ್ಯ ಲೆಕ್ಕಪರಿಶೋಧನಾ ಇಲಾಖೆಯಿಂದ ಈ ಹಿಂದಿನ ಆಡಳಿತ ಮಂಡಳಿಯಿಂದ ಆದ ತಪ್ಪು ಹಾಗೂ ಗುರುತರ ಲೋಪದೋಷಗಳು ತಿಳಿಯಬೇಕಾದಲ್ಲಿ ಆಡಿಟ್ ವರದಿಯು ಅತ್ಯಾವಶ್ಯಕ. ಆದರೆ ಸದರಿ ಆಡಿಟ್ ವರದಿಯು ರಾಜ್ಯ ಲೆಕ್ಕಪರಿಶೋಧನಾ ಇಲಾಖೆಯಿಂದ ದಿನಾಂಕ 21–1–2011 ರಂದು ಬಂದಿದ್ದು, ಈಗಾಗಲೇ ಸದರಿ ನ್ಯೂನತೆಗಳನ್ನು ಸರಿಪಡಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗಿರುವುದರಿಂದ, ಸದರಿ ಲೋಪದೋಷಗಳನ್ನು ಸರಿಪಡಿಸಲು ಸಹ ಕನಿಷ್ಠ 5–6 ತಿಂಗಳು ಅಗತ್ಯವಿರುವ ಹಿನ್ನೆಲೆಯಲ್ಲಿ ಆಡಳಿತಾಧಿಕಾರಿಯವರ ಅವಧಿಯು ದಿನಾಂಕ 10–7–2011 ರಂದು ಪೂರ್ಣಗೊಳ್ಳಲಿರುವುದರಿಂದ, ಸಂಸ್ಥೆಯ ಸಮಗ್ರ ಬೈಲಾ ತಿದ್ದುಪಡಿ ಮತ್ತು ನೂತನ ಚಿತ್ರಕಲಾ ಮಹಾವಿದ್ಯಾಲಯದ ಕ್ಯಾಂಪಸ್‌ನ ಕಾಮಗಾರಿಯನ್ನು ಮಾನ್ಯ ಮುಖ್ಯಮಂತ್ರಿಯವರ ನಿರ್ದೇಶನದಂತೆ ಒಂದು ವರ್ಷದಲ್ಲಿ ಪೂರ್ಣಗೊಳಿಸುವ ಗುರುತರವಾದ ಜವಾಬ್ದಾರಿ ಆಡಳಿತಾಧಿಕಾರಿಯವರಿಗೆ ಇರುವುದರಿಂದ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಾಯ್ದೆ ಕಲಂ 27ಎ (1) (ಸಿ)ರ ಪ್ರಕಾರ ಪುನಃ ಆಡಳಿತಾಧಿಕಾರಿಯವರ ಅವಧಿಯನ್ನು ಮತ್ತೆ 6 ತಿಂಗಳವರೆಗೆ ವಿಸ್ತರಿಸಲು ಅವಕಾಶವಿರುವುದರಿಂದ, ಚಿತ್ರಕಲಾ ಪರಿಷತ್ತಿನ ಸಮಗ್ರ ಅಭಿವೃದ್ಧಿಯ ಹಿತದೃಷ್ಟಿಯಿಂದ ಸಂಸ್ಥೆಯ ಆಡಳಿತಾಧಿಕಾರಿಯವರು ಮತ್ತೆ 6 ತಿಂಗಳು ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸಬೇಕೆಂದು ಕೋರಿರುತ್ತಾರೆ.

ಆಡಳಿತಾಧಿಕಾರಿಗಳು ಸರ್ಕಾರಕ್ಕೆ ಬರೆದಿರುವ ಪತ್ರವನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 165 ಸಸಂನೋ 2010, ಬೆಂಗಳೂರು, ದಿನಾಂಕ : 20–07–2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಚಿತ್ರಕಲಾ ಪರಿಷತ್ತು (ರಿ) ಕುಮಾರಕೃಪಾ ರಸ್ತೆ, ಬೆಂಗಳೂರು ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 (ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆಡಳಿತಾಧಿಕಾರಿಯಾಗಿ ನೇಮಕವಾಗಿರುವ ಶ್ರೀ ಎಂ. ಕೆ. ಶಂಕರಲಿಂಗೇಗೌಡ, ಭಾ.ಆ.ಸೇ., ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಾರಿಗೆ ಇಲಾಖೆ, ಬಹುಮಹಡಿಗಳ ಕಟ್ಟಡ, ಡಾ॥ ಬಿ. ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು ಇವರ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ 10–7–2011 ರಿಂದ ಮತ್ತೆ ಆರು (6) ತಿಂಗಳ ಅವಧಿಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ–2

ಪಿ.ಆರ್. 1873 ಸಹಕಾರ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಬೆಂಗಳೂರು ಮಹಾನಗರ ಸರ್ಕಾರಿ ಪ್ರದೇಶಗಳಲ್ಲಿನ ಕೊಳಗೇರಿ ನಿವಾಸಿಗಳಿಗೆ ಹಕ್ಕುಪತ್ರ ನೀಡುವ ಬಗ್ಗೆ ಪರಿಶೀಲಿಸಿ ವರದಿ ಸಲ್ಲಿಸಲು ಸಮಿತಿ ರಚನೆ ಕುರಿತು.

**ಓದಲಾಗಿದೆ :** ಮಾನ್ಯ ವಸತಿ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ 15–06–2011ರಂದು ನಡೆದ ಸಭೆಯ ನಡವಳಿ.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 15–06–2011ರಂದು ಮಾನ್ಯ ವಸತಿ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಬೆಂಗಳೂರು ಮಹಾನಗರದಲ್ಲಿನ ಸರ್ಕಾರಿ ಪ್ರದೇಶಗಳಲ್ಲಿನ ಕೊಳಗೇರಿ ವಾಸಿಗಳಿಗೆ ಅವರು ವಾಸ ಮಾಡುವ ಜಾಗದ ಹಕ್ಕು ಪತ್ರಗಳನ್ನು ನೀಡುವ ಸಲುವಾಗಿ ಮಾನ್ಯ ನಗರಾಭಿವೃದ್ಧಿ ಸಚಿವರು, ಮಾಜಿ ಸಚಿವರುಗಳು, ಮಾನ್ಯ ವಿಧಾನ ಸಭಾ/ವಿಧಾನ ಪರಿಷತ್ ಸದಸ್ಯರುಗಳು/ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಪೂಜ್ಯ ಮಹಾಪೌರರು/ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ನಗರಾಭಿವೃದ್ಧಿ ಇಲಾಖೆ, ಕಾನೂನು ಇಲಾಖೆ, ಬೆಂಗಳೂರು/ಜಿಲ್ಲಾಧಿಕಾರಿಗಳು ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಹಾಗೂ ವಿವಿಧ ಇಲಾಖೆ/ಮಂಡಳಿ/ನಿಗಮದ ಅಧಿಕಾರಿಗಳೊಂದಿಗೆ ಚರ್ಚಿಸಿ ಕೊಳಚೆ ನಿವಾಸಿಗಳಿಗೆ ಹಕ್ಕುಪತ್ರಗಳನ್ನು ನೀಡುವ ಬಗ್ಗೆ ಒಂದು ತಾತ್ವಿಕವಾದ ನಿಖರವಾದ ಪ್ರಸ್ತಾವನೆಯನ್ನು ರಚಿಸಿ ಒಂದು ತಿಂಗಳೊಳಗಾಗಿ ವರದಿ ನೀಡಲು ನಿರ್ಣಯ ಕೈಗೊಳ್ಳಲಾಗಿರುತ್ತದೆ.

ಸರ್ಕಾರವು ಸದರಿ ಅಂಶವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 43 ಕೊಮಂಇ 2009 (ಭಾ), ಬೆಂಗಳೂರು, ದಿನಾಂಕ : 26–07–2011**

ಕೊಳಚೆ ನಿವಾಸಿಗಳಿಗೆ ಹಕ್ಕುಪತ್ರಗಳನ್ನು ನೀಡುವ ಬಗ್ಗೆ ಒಂದು ತಾತ್ವಿಕವಾದ ನಿಖರವಾದ ಪ್ರಸ್ತಾವನೆಯನ್ನು ರಚಿಸಿ ಒಂದು ತಿಂಗಳೊಳಗಾಗಿ ವರದಿ ನೀಡಲು ನಿರ್ದೇಶಿಸಿ, ಈ ಕೆಳಕಂಡ ಅಧಿಕಾರಿ/ಸದಸ್ಯರುಗಳನ್ನು ಒಳಗೊಂಡಂತೆ ಒಂದು ಸಮಿತಿಯನ್ನು ರಚಿಸಲಾಗಿದೆ.

1. ಸರ್ಕಾರದ ಕಾರ್ಯದರ್ಶಿಗಳು, ವಸತಿ ಇಲಾಖೆ ... ಅಧ್ಯಕ್ಷರು
2. ಸರ್ಕಾರದ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ ... ಸದಸ್ಯರು
3. ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ ... ಸದಸ್ಯರು
4. ಆಯುಕ್ತರು, ಬಿಬಿಎಂಪಿ ... ಸದಸ್ಯರು

5. ಆಯುಕ್ತರು, ಬಿ.ಡಿ.ಎ. ... ಸದಸ್ಯರು
6. ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ... ಸದಸ್ಯರು
7. ವ್ಯವಸ್ಥಾಪಕ ನಿರ್ದೇಶಕರು, ಆರ್.ಜಿ.ಆರ್.ಹೆಚ್.ಸಿ.ಎಲ್. ... ಸದಸ್ಯರು

ಸದರಿ ಸಮಿತಿಯು ಈ ಕೆಳಕಂಡ ಅಂಶಗಳ ಬಗ್ಗೆ ಪರಿಶೀಲಿಸಿ ತನ್ನ ವರದಿಯನ್ನು ಸಲ್ಲಿಸತಕ್ಕದ್ದು.

1. ಸನ್ಮಾನ್ಯ ಮುಖ್ಯ ಮಂತ್ರಿಯವರು ನೀಡಿರುವ ನಿರ್ದೇಶನದಂತೆ ಕರ್ನಾಟಕ ರಾಜ್ಯವನ್ನು ಗುಡಿಸಲು ರಹಿತ ರಾಜ್ಯವನ್ನಾಗಿ ಮಾಡುವ ಸದುದ್ದೇಶದಿಂದ ಹಾಗೂ ಅವರಿಗೆ ಹಕ್ಕು ಪತ್ರವನ್ನು ನೀಡುವ ಸಲುವಾಗಿ ಪ್ರಾರಂಭಿಕವಾಗಿ ಬೆಂಗಳೂರು ಮಹಾನಗರದಲ್ಲಿನ ಸರ್ಕಾರಿ ಪ್ರದೇಶಗಳಲ್ಲಿನ ಕೊಳಗೇರಿ ವಾಸಿಗಳಿಗೆ ಅವರು ವಾಸ ಮಾಡುವ ಜಾಗದ ಹಕ್ಕುಪತ್ರಗಳನ್ನು ನೀಡುವ ಕುರಿತು ಸಾಧಕ-ಬಾಧಕಗಳ ಬಗ್ಗೆ ವಿವರವಾಗಿ ಪರಿಶೀಲಿಸಿ ವರದಿ ನೀಡುವುದು.
2. ಕೊಳಗೇರಿ ನಿವಾಸಿಗಳು ತಾವು ವಾಸ ಮಾಡುವ ಜಾಗದ, ಕುರಿತು ಹಕ್ಕು ಪತ್ರ ಪಡೆಯಲು ಸೂಕ್ತ ಬೆಲೆಯನ್ನು ನಿಗಧಿಪಡಿಸುವ ಬಗ್ಗೆ.
3. ಹಕ್ಕು ಪತ್ರಗಳನ್ನು ನೀಡಿರುವುದನ್ನು ಪರಭಾರೆ ಮಾಡಿರುವುದನ್ನು ಪರಿಶೀಲಿಸಿ ಮೂಲ ನಿವಾಸಿಗಳಿಗೆ ನೀಡಿರುವ ಹಕ್ಕುಪತ್ರಗಳನ್ನು ರದ್ದುಪಡಿಸಿ ಕೊಳಚೆ ಪ್ರದೇಶದ ಮನೆಗಳಲ್ಲಿ ಸುಮಾರು 15-20 ವರ್ಷದಿಂದ ವಾಸ ಮಾಡುತ್ತಿರುವ ನಿವಾಸಿಗಳಿಗೆ ಮರು ಹಕ್ಕು ಪತ್ರಗಳನ್ನು ನೀಡುವ ಬಗ್ಗೆ ಹಾಗೂ ವಾಸ ಸ್ಥಳದ ಭೂ-ಒಡೆತನದ ಹಕ್ಕು ನೀಡುವ ಕುರಿತು.
4. ಇನ್ನು ಮುಂದೆ ಹೊಸ ಕೊಳಚೆ ಪ್ರದೇಶಗಳು ಉದ್ಭವಿಸುವುದನ್ನು ತಡೆಗಟ್ಟಲು ಕೈಗೊಳ್ಳಬಹುದಾದ ಕ್ರಮಗಳ ಬಗ್ಗೆ.
5. ಖಾಸಗಿ ಒಡೆತನದಲ್ಲಿರುವ ಕೊಳಚೆ ಪ್ರದೇಶಗಳಲ್ಲಿನ ನಿವಾಸಿಗಳಿಗೆ ಪುನರ್ವಸತಿ ಕಲ್ಪಿಸಲು ಖಾಸಗಿ ಭೂಮಾಲೀಕರ ಜೊತೆಗೂಡಿ ಜಾಯಿಂಟ್ ವೆಂಚರ್ ಯೋಜನೆಯಲ್ಲಿ ಮನೆಗಳನ್ನು ನಿರ್ಮಿಸುವುದು ಅಥವಾ ಇದು ಸಾಧ್ಯವಿಲ್ಲದಿದ್ದಲ್ಲಿ ಖಾಸಗಿ ಭೂ ಮಾಲೀಕರಿಗೆ ಟಿ.ಡಿ.ಆರ್. ನೀಡುವ ಬಗ್ಗೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ. ಆರ್. ನಾಗರಾಜ**
ಪೀಠಾಧಿಕಾರಿ-4,
ವಸತಿ ಇಲಾಖೆ

ಪಿ.ಆರ್. 1874

## ಇಂಧನ ಸಚಿವಾಲಯ

**ವಿಷಯ :** ಶ್ರೀ ಅಲ್ತಾಫ್ ಹುಸೇನ್ ಜಕಾರ್ತಿ, ಉಪ ವಿದ್ಯುತ್ ಪರಿವೀಕ್ಷಕರು, ಇವರ ಅಮಾನತ್ತಿನ ಅವಧಿಯನ್ನು ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ/ಸಿಆರ್/2/2010, ಚಿಕ್ಕಮಗಳೂರು, ದಿನಾಂಕ 24-02-2010.
2) ಸರ್ಕಾರದ ಆದೇಶ ಸಂಖ್ಯೆ: ಇಎನ್ 28 ಇಬಿಎಸ್ 2010, ದಿನಾಂಕ 26-04-2010.
3) ಸರ್ಕಾರದ ಆದೇಶ ಸಂಖ್ಯೆ: ಇಎನ್ 28 ಇಬಿಎಸ್ 2010 (ಭಾಗ-1), ದಿನಾಂಕ 08-12-2010.
4) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ (ಜಿ)/ಎಂ-5/ಸಿಆರ್-2/2010, ಚಿಕ್ಕಮಗಳೂರು, ದಿನಾಂಕ 11-10-2010.
5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 28 ಇಬಿಎಸ್ 2010 (ಭಾಗ-1) ದಿನಾಂಕ04-03-2011.
6) ಮಹಾಲೇಖಪಾಲರ ಪತ್ರ ಸಂಖ್ಯೆ: GEI2/A3/11-12/21 ದಿನಾಂಕ 11-04-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಚಿಕ್ಕಮಗಳೂರು ರವರು ದಿನಾಂಕ 10-02-2010 ರಂದು ಶ್ರೀ ಅಲ್ತಾಫ್ ಹುಸೇನ್ ಜಕಾರ್ತಿ, ಉಪ ವಿದ್ಯುತ್ ಪರಿವೀಕ್ಷಕರು, ಚಿಕ್ಕಮಗಳೂರು ರವರನ್ನು ಟ್ರ್ಯಾಪ್ ಮಾಡಿದ ವರದಿಯನ್ನು ಆಧರಿಸಿ ಆರೋಪಿತರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13 (1)(ಡಿ) ಜೊತೆಗೆ 13 (2)ರ ಪ್ರಕಾರ ಚಿಕ್ಕಮಗಳೂರು ಲೋಕಾಯುಕ್ತ ಠಾಣೆ ಮೊ.ನಂ. 2/2010 ರಲ್ಲಿ ಪ್ರಕರಣವನ್ನು ದಾಖಲಿಸಿ ಇವರ ಲೀನ್ (ಸ್ಥಾನವನ್ನು)ನ್ನು ಬೇರೆ ಕಡೆಗೆ ವರ್ಗಾಯಿಸುವಂತೆ ಅಪರ ಪೊಲೀಸ್ ಮಹಾನಿರ್ದೇಶಕರು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ 26-04-2010ರ ಆದೇಶದಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಕೋರಿಕೆಯ ಮೇರೆಗೆ ಶ್ರೀ ಅಲ್ತಾಫ್ ಹುಸೇನ್ ಜಕಾರ್ತಿ, ಉಪ ವಿದ್ಯುತ್ ಪರಿವೀಕ್ಷಕರು, ಚಿಕ್ಕಮಗಳೂರು ರವರನ್ನು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10 ರಂತೆ ಮುಂದಿನ ತನಿಖೆಯನ್ನು ಬಾಕಿಯಿಟ್ಟು ಅಮಾನತ್ತಿನಲ್ಲಿಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ 08-12-2010ರ ಆದೇಶದಲ್ಲಿ ಶ್ರೀ ಅಲ್ತಾಫ್ ಹುಸೇನ್ ಜಕಾರ್ತಿ, ಉಪ ವಿದ್ಯುತ್ ಪರಿವೀಕ್ಷಕರು, ಚಿಕ್ಕಮಗಳೂರು ಇವರ ಅಮಾನತ್ತನ್ನು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10 (5) (ಸಿ) ಗಳಡಿಯಲ್ಲಿ ಅಮಾನತ್ತನ್ನು ತೆರವುಗೊಳಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಉಪ ವಿದ್ಯುತ್ ಪರಿವೀಕ್ಷಕರ ಕಚೇರಿ, ಮಂಡ್ಯ ಇಲ್ಲಿ ಖಾಲಿ ಇರುವ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7 13 (1)(ಡಿ) ಜೊತೆಗೆ 13 (2)ರ ಪ್ರಕಾರ ಎಸಗಿರುವ ಅಪರಾಧಕ್ಕಾಗಿ ಆರೋಪಿತರನ್ನು

ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19 (1) (ಬಿ) ರನ್ವಯ ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಆದೇಶದಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19 (1) (ಬಿ) ರನ್ವಯ ಆಪಾದಿತರಾದ ಶ್ರೀ ಅಲ್ತಾಫ್ ಹುಸೇನ್ ಜಕಾರ್ತಿ, ಉಪ ವಿದ್ಯುತ್ ಪರಿವೀಕ್ಷಕರು ರವರನ್ನು ಅಭಿಯೋಜನೆಗೆ ಒಳಪಡಿಸಲು ಕೋರಿದ್ದು, ಪ್ರಕರಣ ಸಂಖ್ಯೆ: 02/2010ಕ್ಕೆ ಸಂಬಂಧಿಸಿದಂತೆ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜಿಸಲು ಮಂಜೂರಾತಿ ನೀಡಬೇಕೆಂಬ ಕರ್ನಾಟಕ ಲೋಕಾಯುಕ್ತದ ಅಪರ ಪೊಲೀಸ್ ಮಹಾನಿರ್ದೇಶಕರ ಕೋರಿಕೆಯನ್ನು ಸರ್ಕಾರವು ಕೈಬಿಟ್ಟಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ಶ್ರೀ ಅಲ್ತಾಫ್ ಹುಸೇನ್ ಜಕಾರ್ತಿ, ಉಪ ವಿದ್ಯುತ್ ಪರಿವೀಕ್ಷಕರು ಇವರನ್ನು ಸರ್ಕಾರಿ ಆದೇಶ ಸಂಖ್ಯೆ: ಇಎನ್ 28 ಇಬಿಎಸ್ 2010 (ಭಾಗ-1) ದಿನಾಂಕ 04–03–2011ರ ಪ್ರಕಾರ ದಿನಾಂಕ 26–04–2010 ರಿಂದ 08–12–2010 ರವರೆಗಿನ ಅಮಾನತ್ತಿನ ಅವಧಿಯನ್ನು ಸಕ್ರಮಗೊಳಿಸಲು ಕೋರಲಾಗಿದೆ.

ಮೇಲಿನ ಪ್ರಸ್ತಾವನೆಯನ್ನು ಸಮಗ್ರವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 28 ಇಬಿಎಸ್ 2010 (ಭಾಗ–1), ಬೆಂಗಳೂರು, ದಿನಾಂಕ : 26–07–2011**

ಸರ್ಕಾರಿ ಆದೇಶ ಸಂಖ್ಯೆ: ಇಎನ್ 28 ಇಬಿಎಸ್ 2010 (ಭಾಗ–1) ದಿನಾಂಕ 04–03–2011ರಲ್ಲಿ ಅಪರ ಪೊಲೀಸ್ ಮಹಾನಿದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಶ್ರೀ ಅಲ್ತಾಫ್ ಹುಸೇನ್ ಜಕಾರ್ತಿ, ಉಪ ವಿದ್ಯುತ್ ಪರಿವೀಕ್ಷಕರು, ವಿದ್ಯುತ್ ಪರಿವೀಕ್ಷಣಾಲಯ ಇವರನ್ನು ಅಭಿಯೋಜನೆಗೆ ಒಳಪಡಿಸಲು ಕೋರಿದ ಪ್ರಸ್ತಾವನೆಯನ್ನು ಸರ್ಕಾರವು ತಿರಸ್ಕರಿಸಿದೆ. ಆದ್ದರಿಂದ ಅವರ ಅಮಾನತ್ತಿನ ಅವಧಿಯನ್ನು ಸಕ್ರಮಗೊಳಿಸುವುದು ಅವಶ್ಯವಿರುವುದರಿಂದ ಮತ್ತು ಮಹಾಲೇಖಪಾಲರು ಈ ಬಗ್ಗೆ ಆದೇಶ ಕೋರಿರುವುದರಿಂದ ಕರ್ನಾಟಕ ನಾಗರಿಕ ಸೇವಾ ನಿಯಮಗಳು 100 (3)ರ ಪ್ರಕಾರ ದಿನಾಂಕ 26–04–2010 ರಿಂದ 08–12–2010 ರವರೆಗಿನ ಅವಧಿಯನ್ನು ಕರ್ತವ್ಯದ ಅವಧಿ ಎಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುಜಾತಮ್ಮ**

ಪೀಠಾಧಿಕಾರಿ

ಪಿ.ಆರ್. 1875 ಇಂಧನ ಇಲಾಖೆ

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇಲ್ಲಿನ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಯೋಇ 30 ಹೈಕಮಂ 2010, ದಿನಾಂಕ 24–06–2010

**2)** ಕಾರ್ಯದರ್ಶಿ, ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇವರ ಪತ್ರ ಸಂಖ್ಯೆ: ಹೈಕಮಂ/ಸಿಬ್ಬಂದಿ/15/94–95/161, ದಿನಾಂಕ 20–04–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ 24–06–2010ರ ಸರ್ಕಾರದ ಆದೇಶದಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಸೂಚಿಸಲಾದ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ 31–03–2011ರವರೆಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಕಾರ್ಯದರ್ಶಿ, ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇಲ್ಲಿನ ಕಾರ್ಯಾಲಯದಲ್ಲಿ ಇದುವರೆವಿಗೂ ಮುಂದುವರಿಸಲಾದ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ 01–04–2011ರಿಂದ 31–03–2012ರವರಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 26 ಹೈಕಮಂ 2011, ಬೆಂಗಳೂರು, ದಿನಾಂಕ : 27–07–2011**

ಪ್ರಸ್ತಾವನೆಯಲ್ಲಿ ಹೇಳಿರುವ ಸನ್ನಿವೇಶಗಳಿಂದಾಗಿ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿ ಸೃಜಿಸಲಾದ ಈ ಕೆಳಗೆ ನಮೂದಿಸಿದ ಎಲ್ಲಾ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ 01–04–2011 ರಿಂದ 31–03–2012 ರವರೆಗೆ ಮುಂದುವರೆಸಲು ಸರ್ಕಾರದ ಮಂಜೂರಾತಿ ನೀಡಿದೆ.

| ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|
| **ಅ. ಆಡಳಿತ ವಿಭಾಗ** | |
| 1. ಅಧೀನ ಕಾರ್ಯದರ್ಶಿ | 1 |
| 2. ಬೆರಳಚ್ಚುಗಾರರು | 2 |
| 3. ವಾಹನ ಚಾಲಕರು | 1 |

| | |
|---|---|
| **ಆ. ಯೋಜನಾ ವಿಭಾಗ** | |
| 1. ಜಂಟಿ ನಿರ್ದೇಶಕರು (ಯೋ) | 1 |
| 2. ಸಹಾಯಕ ಸಾಂಖ್ಯಿಕ ಅಧಿಕಾರಿ | 1 |

| | |
|---|---|
| 3. ಸಾಂಖ್ಯಿಕ ನಿರೀಕ್ಷಕರು | 1 |
| 4. ಸೀನಿಯರ್ ಪ್ರೊಗ್ರಾಮರ್ | 1 |
| 5. ಕಂಪ್ಯೂಟರ್ ಆಪರೇಟರ್ | 1 |
| **ಇ. ತಾಂತ್ರಿಕ ವಿಭಾಗ** | |
| 1. ಕಾರ್ಯನಿರ್ವಾಹಕ ಅಭಿಯಂತರರು | 1 |
| 2. ಸಹಾಯಕ ಅಭಿಯಂತರರು | 2 |
| 3. ಶೀಘ್ರಲಿಪಿಗಾರರು | 1 |
| 4. ಗ್ರೂಪ್ ಡಿ-1 | 1 |

2) ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10-07-1996ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಬಿ. **ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ-1 ಮತ್ತು 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು
ಸಾಂಖ್ಯಿಕ ಇಲಾಖೆ

ಪಿ.ಆರ್. 1876

## ಯುವಜನ ಸೇವಾ ಸಚಿವಾಲಯ

**ವಿಷಯ :** ಕೆ.ಎ.ಟಿ. ಅರ್ಜಿ ಸಂಖ್ಯೆ: 5889/2001ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿ: 27-10-2010ರಂದು ನೀಡಿದ ಆದೇಶ – ಕ್ಯಾಪ್ಟನ್ ಅಲೋಶಿಯಸ್ ಪಿಂಟೋ, ನಿವೃತ್ತ ಸಹಾಯಕ ವೈಮಾನಿಕ ತರಬೇತಿದಾರರು, ಸರ್ಕಾರಿ ವೈಮಾನಿಕ ತರಬೇತಿ ಶಾಲೆ, ಇವರ ಅಮಾನತ್ತಿನ ಅವಧಿಯನ್ನು ಇತ್ಯರ್ಥಪಡಿಸುವ ಬಗ್ಗೆ.

**ಓದಲಾಗಿದೆ :**
1. ದಿನಾಂಕ: 28-08-1999ರ ವಾಪ್ರಯು 182 ಯುಇಸೇ 97ನೇ ಸಂಖ್ಯೆಯ ಸರ್ಕಾರದ ಆದೇಶ.
2. ದಿನಾಂಕ: 23/12/1999ರ ವಾಪ್ರಯು 182 ಯುಇಸೇ 97ನೇ ಸಂಖ್ಯೆಯ ಸರ್ಕಾರದ ಆದೇಶ.
3. ಕೆ.ಎ.ಟಿ. ಅರ್ಜಿ ಸಂಖ್ಯೆ: 5889/2001 ಪ್ರಕರಣದಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿ: 27/10/2010ರಂದು ನೀಡಿರುವ ಆದೇಶ.
4. ಸರ್ಕಾರಿ ವಕೀಲರು, ಕರ್ನಾಟಕ ಆಡಳಿತ ನ್ಯಾಯ ಮಂಡಳಿ, ಬೆಂಗಳೂರು, ಇವರ ದಿನಾಂಕ: 04-12-2010ರ 17078/ಎಜಿ/ಕೆಎಟಿ/10-11ನೇ ಸಂಖ್ಯೆಯ ಪತ್ರ.
5. ದಿನಾಂಕ: 24/02/2011ರ ಯುಸೇಇ 04 ಯುರಾಸೇ 2011ನೇ ಸಂಖ್ಯೆಯ ಸರ್ಕಾರಿ ಆದೇಶ.
6. ದಿನಾಂಕ: 24/02/2011ರ ಯುಸೇಇ 04 ಯುರಾಸೇ 2011ನೇ ಸಂಖ್ಯೆಯ ನೋಟೀಸ್.
7. ದಿನಾಂಕ: 09/03/2011ರ ಕ್ಯಾ ಅಲೋಷಿಯಸ್ ಪಿಂಟೋರವರ ಪತ್ರ.

**ಪ್ರಸ್ತಾವನೆ :**

ಸರ್ಕಾರಿ ವೈಮಾನಿಕ ತರಬೇತಿ ಶಾಲೆಯಲ್ಲಿ ಈ ಹಿಂದೆ ಸಹಾಯಕ ವೈಮಾನಿಕ ತರಬೇತಿದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ, ಕ್ಯಾಪ್ಟನ್ ಅಲೋಶಿಯಸ್ ಪಿಂಟೋರವರು ಸರ್ಕಾರಿ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾಗಿರುವುದು, ರಾಜ್ಯ ಮತ್ತು ಕೇಂದ್ರ ಸರ್ಕಾರದ ಜೊತೆ ನೇರವಾಗಿ ಪತ್ರ ವ್ಯವಹಾರ ನಡೆಸಿರುವುದು, ಇತ್ಯಾದಿ, ಅನುಚಿತ ವರ್ತನೆಗಳಿಗಾಗಿ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆದು ಮೇಲೆ (1)ರಲ್ಲಿ ಓದಲಾದ ದಿ: 28/08/1999ರ ಸರ್ಕಾರಿ ಆದೇಶದಲ್ಲಿ ಅವರಿಗೆ **"ವಾಗ್ದಂಡನೆ"** ವಿಧಿಸಲಾಗಿತ್ತು. ಹಾಗೂ ವಿಚಾರಣೆ ಸಂಬಂಧ ಅವರನ್ನು ದಿನಾಂಕ: 25/11/1998 ರಿಂದ 12/05/1999ರವರೆಗೆ ಅಮಾನತ್ತಿನಲ್ಲಿರಿಸಿದ ಅವಧಿಯನ್ನು " ಅಮಾನತ್ತಿನ ಅವದಿ" ಯೆಂದು ಪರಿಗಣಿಸಿ ಮೇಲೆ(2)ರಲ್ಲಿ ಓದಲಾದ ದಿನಾಂಕ: 23/12/1999ರ ಆದೇಶವನ್ನು ಹೊರಡಿಸಲಾಯಿತು.

ಮೇಲ್ಕಂಡ ಎರಡು ಆದೇಶಗಳನ್ನು ಪ್ರಶ್ನಿಸಿ ಕ್ಯಾಪ್ಟನ್ ಅಲೋಶಿಯಸ್ ಪಿಂಟೋರವರು ಕರ್ನಾಟಕ ಆಡಳಿತ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 5889/2001 ಅನ್ನು ಸಲ್ಲಿಸಿದ್ದರು. ಕರ್ನಾಟಕ ಆಡಳಿತ ಮಂಡಳಿಯು ಮೇಲೆ (3)ರಲ್ಲಿ ಓದಲಾದ ದಿ: 27/10/2010ರಂದು ಈ ಪ್ರಕರಣದಲ್ಲಿ ಆದೇಶ ಹೊರಡಿಸಿ ದಿನಾಂಕ: 28/08/1999ರ ಆದೇಶವನ್ನು ಸ್ಥಿರೀಕರಿಸಿರುತ್ತದೆ ಮತ್ತು ಅರ್ಜಿದಾರರ ಅಮಾನತ್ತಿನ ಅವಧಿಯನ್ನು ಹಾಗೆಂದು ಪರಿಗಣಿಸುವಾಗ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 100 ರಲ್ಲಿ ನಿಗದಿಪಡಿಸಲಾಗಿರುವ ಕಾರ್ಯವಿಧಾನವನ್ನು ಅನುಸರಿಸಲಿಲ್ಲ ಎಂಬ ಆಧಾರದ ಮೇಲೆ ಇವರ ಅಮಾನತ್ತಿನ ಅವಧಿಯನ್ನು ಹಾಗೆಂದೆ ಪರಿಗಣಿಸಿದ ದಿ: 23/12/1999ರ ಸರ್ಕಾರಿ ಆದೇಶವನ್ನು ರದ್ದುಪಡಿಸಿರುತ್ತದೆ. ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 100ರಲ್ಲಿ ನಿಗದಿಪಡಿಸಿದ ಕಾರ್ಯವಿಧಾನವನ್ನು ಅನುಸರಿಸಿದ ನಂತರ ಹೊಸ ಆದೇಶವನ್ನು ಹೊರಡಿಸಬೇಕೆಂದು ನಿರ್ದೇಶಿಸಿರುತ್ತದೆ.

ಸರ್ಕಾರಿ ವಕೀಲರು ಮೇಲೆ(4)ರಲ್ಲಿ ಓದಲಾದ ದಿ: 04/12/2010ರ ಪತ್ರದಲ್ಲಿ ಈ ಪ್ರಕರಣವು ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಲ್ಲಿಸಲು ಅರ್ಹವಲ್ಲವೆಂದು ಅಭಿಪ್ರಾಯಪಟ್ಟಿರುತ್ತಾರೆ.

ಕರ್ನಾಟಕ ಆಡಳಿತ ಮಂಡಳಿಯು ಅರ್ಜಿ ಸಂಖ್ಯೆ: 5889/2001ರಲ್ಲಿ ನೀಡಿದ ದಿ: 27/10/2010ರ ಆದೇಶವನ್ನು ಅನುಷ್ಠಾನಗೊಳಿಸಿ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 100ರ ವಿಧಿವಿಧಾನವನ್ನು ಪಾಲಿಸಿದ ನಂತರ ಹೊಸದಾಗಿ ಆದೇಶ ಹೊರಡಿಸುವ ಪ್ರಕ್ರಿಯೆಯನ್ನು ಕಾಯ್ದಿಟ್ಟು ಶ್ರೀ ಅಲೋಶಿಯಸ್ ಪಿಂಟೋ, ನಿವೃತ್ತ ಸಹಾಯಕ ವೈಮಾನಿಕ ತರಬೇತಿದಾರರು, ಇವರ ಅಮಾನತ್ತಿನ ಅವಧಿಯನ್ನು ಹಾಗೆಂದೆ ಪರಿಗಣಿಸಿದ ದಿನಾಂಕ: 23/12/1999ರ ಸರ್ಕಾರಿ ಆದೇಶವನ್ನು ಮೇಲೆ (5)ರಲ್ಲಿ ಓದಲಾದ ದಿನಾಂಕ: 24/02/2011ರ ಸರ್ಕಾರಿ ಆದೇಶ ಮೂಲಕ ರದ್ದುಪಡಿಸಲಾಯಿತು.

ಕ್ಯಾ. ಅಲೋಶಿಯಸ್ ಪಿಂಟೋರವರಿಗೆ ಮೇಲೆ (6)ರಲ್ಲಿ ಓದಲಾದ ದಿನಾಂಕ: 24/02/2011ರ ನೋಟೀಸ್ ನೀಡಿ, 25/11/1998 ರಿಂದ 12/05/1999ರವರೆಗೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು "ಕರ್ತವ್ಯದ ಮೇಲೆ ಕಳೆಯದ ಅವಧಿ" ಎಂದು ಏಕೆ ಪರಿಗಣಿಸಬಾರದೆಂಬುದಕ್ಕೆ ಅವರ ಸಮಜಾಯಿಷಿ ಕೇಳಲಾಗಿತ್ತು. ಸದರಿ ನೋಟೀಸ್‌ಗೆ ಕ್ಯಾ. ಅಲೋಶಿಯಸ್ ಪಿಂಟೋರವರು ಮೇಲೆ (7)ರಲ್ಲಿ ಓದಲಾದ ದಿನಾಂಕ: 09/03/2011ರ ಉತ್ತರವನ್ನು ಸಲ್ಲಿಸಿ ತರಬೇತಿ ಪಡೆಯುತ್ತಿರುವ ಅಭ್ಯರ್ಥಿಗಳಿಗೆ ವಿಮಾನ ಬೋಧಕರಿಲ್ಲದೇ ತೊಂದರೆಯಾಗಿರುವುದನ್ನು ಪರಿಗಣಿಸಿ ಅಮಾನತ್ತನ್ನು ರದ್ದುಪಡಿಸಿ ತಮ್ಮನ್ನು ಸೇವೆಗೆ ತೆಗೆದುಕೊಂಡಿರುವ ಕಾರಣ ತಮ್ಮನ್ನು ಅಮಾನತ್ತಿನಲ್ಲಿಟ್ಟಿದ್ದು ತಪ್ಪಾಗಿದೆಯೆಂದು ತಿಳಿಸಿ ಇವರ ಅಮಾನತ್ತಿನ ಅವಧಿಯನ್ನು ಕಾರ್ಯ ನಿರ್ವಹಿಸಿದ ಅವಧಿಯೆಂದು ಪರಿಗಣಿಸಿ, ಪೂರ್ಣವೇತನ ನೀಡುವಂತೆ ಕೋರಿರುತ್ತಾರೆ. ಹಾಗೂ ಮುಖ್ಯ ವೈಮಾನಿಕ ತರಬೇತುದಾರರ ಕರ್ತವ್ಯವನ್ನು ನಿರ್ವಹಿಸದೇ ಇದ್ದುದಕ್ಕಾಗಿ ಸಹಾಯಕ ವಿಮಾನ ಬೋಧಕರಾಗಿದ್ದ ತಮ್ಮನ್ನು ಅಮಾನತ್ತುಗೊಳಿಸಿದ್ದು ಸರಿಯಲ್ಲ ಎಂದು ಸಹ ತಿಳಿಸಿರುತ್ತಾರೆ.

ಶ್ರೀಯುತರು ತಮ್ಮ ದಿನಾಂಕ: 09/03/2011ರ ಮನವಿಯಲ್ಲಿ, ಅರ್ಜಿ ಸಂಖ್ಯೆ: 5889/01ರಲ್ಲಿ ಕೆ.ಎ.ಟಿ.ಯು ದಿನಾಂಕ: 27/10/2010 ರಂದು ನೀಡಿದ್ದ ಆದೇಶದಂತೆ ದಿನಾಂಕ: 23/12/1999ರ ಸರ್ಕಾರ ಆದೇಶವನ್ನು ರದ್ದುಪಡಿಸಿದ ಬಗ್ಗೆ ಏನು ಕ್ರಮ ತೆಗೆದುಕೊಳ್ಳಲಿಲ್ಲ ಮತ್ತು ಈ ಬಗ್ಗೆ ತರಬೇತಿ ಶಾಲೆಗಾಗಲಿ, ಮಹಾಲೇಖಪಾಲಕರಿಗಾಗಲಿ ಹಾಗೂ ತಮಗಾಗಲಿ ಯಾವುದೆ ಮಾಹಿತಿ ಸಲ್ಲಿಸಿಲ್ಲ, ಎಂದು ತಿಳಿಸಿರುತ್ತಾರೆ. ಆದರೆ ದಿನಾಂಕ: 24/02/2011ರಂದು ಹೊರಡಿಸಿದ ಯುಸೇಇ 04 ಯುರಾಸೇ 2011ನೇ ಸಂಖ್ಯೆಯ ಸರ್ಕಾರಿ ಆದೇಶದಲ್ಲಿ, ಸರ್ಕಾರವು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 5889/01ರಲ್ಲಿ ನೀಡಿದ ದಿನಾಂಕ: 27/10/2010ರ ಆದೇಶವನ್ನು ಅನುಷ್ಠಾನಗೊಳಿಸಿ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 100 ವಿಧಿ ವಿಧಾನವನ್ನು ಪಾಲಿಸಿದ ನಂತರ ಹೊಸದಾಗಿ ಆದೇಶ ಹೊರಡಿಸುವ ಪ್ರಕ್ರಿಯೆಯನ್ನು ಕಾಯ್ದಿಟ್ಟು ಶ್ರೀ. ಅಲೋಶಿಯಸ್ ಪಿಂಟೋ, ನಿವೃತ್ತ ಸಹಾಯಕ ವೈಮಾನಿಕ ತರಬೇತಿದಾರರು, ಅವರ ಅಮಾನತ್ತಿನ ಅವದಿಯನ್ನು ಹಾಗೆಂದೆ ಪರಿಗಣಿಸಿದ ದಿನಾಂಕ: 23/12/1999ರ ಸರ್ಕಾರಿ ಆದೇಶವನ್ನು ರದ್ದುಪಡಿಸಿ ಆದೇಶವನ್ನು ಹೊರಡಿಸಿತ್ತು.

ಮುಂದುವರೆದು ಶ್ರೀಯುತರು ತಮ್ಮ ದಿನಾಂಕ: 09/03/2011ರ ಮನವಿಯಲ್ಲಿ ಈ ಕೆಳಕಂಡ ಅಂಶಗಳನ್ನು ಸಹ ಪ್ರಸ್ತಾಪ ಮಾಡಿರುತ್ತಾರೆ.

(ಅ) ದಿನಾಂಕ: 12/05/1999ರ ವಾಪ್ರಯು 182 ಯುಇಸೇ 97ನೇ ಸಂಖ್ಯೆಯ ಆದೇಶದ ಮೂಲಕ ಇವರ ಅಮಾನತ್ತನ್ನು ರದ್ದುಗೊಳಿಸಿ ಇವರನ್ನು ಪುನರ್ ಸ್ಥಾಪಿಸಲಾಗಿದೆಯೆಂದೂ, ಇದೇ ಸಂದರ್ಭದಲ್ಲಿ ಪುನರ್ ಸ್ಥಾಪಿಸಿದ ಅಧಿಕಾರಿಯವರು ನಿಯಮ 100ರ ವಿಧಿ ವಿಧಾನಗಳನ್ನು ಪಾಲಿಸಬೇಕಾಗಿತ್ತೆಂದು, ಪ್ರಸ್ತುತ ತರಬೇತಿ ಪಡೆಯುತ್ತಿರುವ ಅಭ್ಯರ್ಥಿಗಳಿಗೆ ವಿಮಾನ ಬೋಧಕರಿಲ್ಲದೆ ತೊಂದರೆಯಾಗುವುದನ್ನು ಪರಿಗಣಿಸಿ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸದರಿಯವರ ಅಮಾನತ್ತನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸುವುದರಿಂದ ಇವರನ್ನು ಅಮಾನತ್ತಿನಲ್ಲಿಟ್ಟಿದ್ದು ತಪ್ಪು ಎಂದು ಊಹಿಸಿ ಪೂರ್ತಿ ವೇತನವನ್ನು ನೀಡಲು ಆದೇಶಿಸಬೇಕೆಂದು ವಿನಂತಿಸಿರುತ್ತಾರೆ.

(ಆ) ಇವರ ಅಮಾನತ್ತಿನ ಆದೇಶವನ್ನು ತಕ್ಷಣವೇ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿರುತ್ತದೆ. ಆದ್ದರಿಂದ ಪುನ: ಅದನ್ನು ಜಾರಿಗೆ ತರಲು ಬರುವುದಿಲ್ಲವೆಂದೂ ಮತ್ತು ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿದ್ದರೂ ಇಲಾಖಾ ವಿಚಾರಣೆ ನಡೆಸಿಲ್ಲ ಎಂದು ತಿಳಿಸಿರುತ್ತಾರೆ.

ಶ್ರೀಯುತರ ಮನವಿಯಲ್ಲಿನ ಮೇಲ್ಕಂಡ ಅಂಶಗಳನ್ನು ವಿವರವಾಗಿ ಪರಿಶೀಲಿಸಲಾಗಿದೆ. ಸರ್ಕಾರಿ ವೈಮಾನಿಕ ತರಬೇತಿ ಶಾಲೆಯ ಚಟುವಟಿಕೆಗಳು ಸುಗಮವಾಗಿ ನಡೆಯಲೆಂಬ ದೃಷ್ಟಿಯಿಂದ ದಿನಾಂಕ: 12/05/1999 ರ ಆದೇಶದ ಮೂಲಕ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಇವರ ಅಮಾನತ್ತನ್ನು ರದ್ದುಗೊಳಿಸಿ ಇವರನ್ನು ಸೇವೆಗೆ ತೆಗೆದುಕೊಳ್ಳಲಾಗಿರುತ್ತದೆ. ಈ ಆದೇಶವನ್ನು ಹೊರಡಿಸುವಾಗ, ಸರ್ಕಾರಿ ವೈಮಾನಿಕ ತರಬೇತಿ ಶಾಲೆಯ ಹಾರಾಟ ಚಟುವಟಿಕೆ ಸ್ಥಗಿತಗೊಂಡಿರುವುದನ್ನು ಮತ್ತು ತರಬೇತಿ ಪಡೆಯುತ್ತಿರುವ ಅಭ್ಯರ್ಥಿಗಳಿಗೆ ಬೋಧಕರಿಲ್ಲದೆ ತೊಂದರೆಯಾಗುತ್ತಿರುವ ಅಂಶಗಳನ್ನು ಪರಿಗಣಿಸಲಾಗಿದೆ. ಲಭ್ಯವಿರುವ ದಾಖಲೆಗಳನ್ನು ಪರಿಶೀಲಿಸಿದ ನಂತರ ಶ್ರೀಯುತರು ಸರ್ಕಾರದ ನೀತಿ ನಿಯಮಗಳನ್ನು ಉಲ್ಲಂಘಿಸಿರುವುದು, ಹಿರಿಯ ಅಧಿಕಾರಿಗಳ ಜೊತೆ ಅಸಹಕಾರ ಮಾಡಿರುವುದು, ಕೇಂದ್ರ ಸರ್ಕಾರದ ಜೊತೆ ನೇರವಾಗಿ ಪತ್ರ ವ್ಯವಹಾರ ಮಾಡಿರುವುದು ಪ್ರಮುಖವಾಗಿ ಸಾಬೀತಾಗಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ 1957ರ ನಿಯಮ 12ರಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿನಾಂಕ: 28/08/1999ರ ಆದೇಶದ ಮೂಲಕ ಇವರಿಗೆ "ವಾಗ್ದಂಡನೆ" ಯನ್ನು ವಿಧಿಸಲಾಗಿರುತ್ತದೆ. ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1977ರ ನಿಯಮ 8(ii) ರನ್ವಯ ಇದು ದಂಡನೆಯಾಗುತ್ತದೆ. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿನಾಂಕ: 27/10/2010ರ ಆದೇಶದಲ್ಲಿ, ಇವರಿಗೆ "ವಾಗ್ದಂಡನೆ" ವಿಧಿಸಿರುವುದನ್ನು ಎತ್ತಿ ಹಿಡಿದಿದೆ. ಆದ್ದರಿಂದ ಶ್ರೀಯುತರನ್ನು ಅಮಾನತ್ತಿನಲ್ಲಿಟ್ಟಿದ್ದು ಸರಿಯಲ್ಲವೆಂಬ ಇವರ ನಿಲುವನ್ನು ಒಪ್ಪಲಾಗುವುದಿಲ್ಲ.

ಈ ಹಿಂದೆ ಹೊರಡಿಸಲಾಗಿದ್ದ ದಿನಾಂಕ: 06/04/1998ರ ಸರ್ಕಾರಿ ಆದೇಶದಲ್ಲಿ ಶಾಲೆಯ ಎಲ್ಲಾ ವೈಮಾನಿಕ ಚಟುವಟಿಕೆಗಳನ್ನು ಉಸ್ತುವಾರಿ ಮಾಡಲು ಈ ಹಿಂದೆ ಶ್ರೀಯುತರಿಗೆ ಪೂರ್ಣ ಅಧಿಕಾರ ನೀಡಲಾಗಿತ್ತು. ಇದರ ಅರ್ಥ ವೈಮಾನಿಕ ಚಟುವಟಿಕೆ ನಡೆಸಲು ಕೈಗೊಳ್ಳಬೇಕಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳಲು ಅವರಿಗೆ ಯಾವುದೇ ಅಡ್ಡಿ ಇರಲಿಲ್ಲ. ಈ ಅಧಿಕಾರವನ್ನು ಬಳಸಿಕೊಂಡು ವೈಮಾನಿಕ ಚಟುವಟಿಕೆ ನಡೆಸಲು ಅವರು ಕ್ರಮ ಕೈಗೊಳ್ಳಬೇಕಿತ್ತು. ಅದನ್ನು ಮಾಡುವುದಕ್ಕೆ ಬದಲಾಗಿ ಕ್ಯಾ. ಅಲೋಷಿಯಸ್ ಪಿಂಟೋರವರು ಸರ್ಕಾರದ ಆದೇಶ, ಡಿ.ಜಿ.ಸಿ.ಎ ನಿಯಮಗಳನ್ನು ಪಾಲಿಸದೇ ಇರುವುದು ಮತ್ತು ಕಛೇರಿಗೆ ಗೈರು ಹಾಜರಾಗುವುದು, ರಾಜ್ಯ ಮತ್ತು ಕೇಂದ್ರ ಸರ್ಕಾರದೊಂದಿಗೆ ನೇರವಾಗಿ ಪತ್ರ ವ್ಯವಹಾರ ನಡೆಸುವುದು, ಇತ್ಯಾದಿಗಳನ್ನು, ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತನೆ ಮಾಡಿರುವರು. ಮುಖ್ಯ ವಿಮಾನ ಬೋಧಕರ ಕೆಲಸವನ್ನು ನಿರ್ವಹಿಸದೇ ಇದ್ದುದಕ್ಕಾಗಿ ಸಹಾಯಕ ವೈಮಾನಿಕ ಬೋಧಕರಾದ ಶ್ರೀಯುತರನ್ನು ಅಮಾನತ್ತುಗೊಳಿಸಿದ್ದು ಸರಿಯಲ್ಲವೆಂಬ ಇವರ ನಿಲುವು ಒಪ್ಪತಕ್ಕದ್ದಲ್ಲ. ಈ ಕಾರಣಗಳಿಗಾಗಿ ಕರ್ನಾಟಕ ಆಡಳಿತ ಮಂಡಳಿಯು ದಿನಾಂಕ: 27/10/2010ರ ಆದೇಶದಲ್ಲಿ ಇವರಿಗೆ "ವಾಗ್ದಂಡನೆ" ವಿಧಿಸಿರುವುದನ್ನು ಎತ್ತಿ ಹಿಡಿದಿದೆ. ಮತ್ತು ಅಮಾನತ್ತಿನ ಅವಧಿಯನ್ನು ಪರಿಗಣಿಸುವಾಗ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 100ರಲ್ಲಿ ನಿಗದಿಪಡಿಸಿರುವ

ಕಾರ್ಯವಿಧಾನವನ್ನು ಅನುಸರಿಸಿಲ್ಲವೆಂಬ ಕಾರಣಕ್ಕಾಗಿ ಅಮಾನತ್ತಿನ ಅವಧಿಯನ್ನು ಹಾಗೆಂದೇ ಪರಿಗಣಿಸಿದ ದಿನಾಂಕ: 23/12/1999ರ ಆದೇಶವನ್ನು ರದ್ದುಪಡಿಸಿ ಕಾರ್ಯವಿಧಾನವನ್ನು ಅನುಸರಿಸಿದ ನಂತರ ಅಮಾನತ್ತಿನ ಅವಧಿ ಕುರಿತು ಹೊಸದಾಗಿ ಆದೇಶ ಹೊರಡಿಸಬೇಕೆಂದು ನಿರ್ದೇಶನ ನೀಡಿದೆ. ಅದರಂತೆ, ಕ್ಯಾ. ಅಲೋಷಿಯಸ್ ಪಿಂಟೋರವರಿಗೆ ದಿನಾಂಕ: 24/02/2011ರ ನೋಟೀಸ್ ನೀಡಲಾಗಿದೆ. ಅವರು ಸದರಿ ನೋಟೀಸ್‌ಗೆ ನೀಡಿದ ಉತ್ತರವನ್ನು ಪರಿಶೀಲಿಸಲಾಗಿ ಅದರಲ್ಲಿ ಅವರು ಪ್ರಸ್ತಾಪಿಸಿರುವ ಅಂಶಗಳು ಅಂಗೀಕಾರಾರ್ಹವಲ್ಲ.

ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 04 ಯುರಾಸೇ 2011 (ಭಾ-1), ಬೆಂಗಳೂರು, ದಿನಾಂಕ: 25/07/2011.**

ಪ್ರಸ್ತಾವನೆಯಲ್ಲಿನ ವಿವರಣೆಗಳ ಹಿನ್ನೆಲೆಯಲ್ಲಿ ಸರ್ಕಾರಿ ವೈಮಾನಿಕ ತರಬೇತಿ ಶಾಲೆಯಲ್ಲಿ ಸಹಾಯಕ ವೈಮಾನಿಕ ಬೋಧಕರಾಗಿ ನಿವೃತ್ತರಾಗಿರುವ ಕ್ಯಾ. ಅಲೋಷಿಯಸ್ ಪಿಂಟೋರವರು, ದಿನಾಂಕ: 25/11/1998 ರಿಂದ 12/05/1999ರ ವರೆಗೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು **"**ಕರ್ತವ್ಯದ ಮೇಲೆ ಕಳೆಯದ ಅವಧಿ (period not spent on duty)" ಎಂದು ಪರಿಗಣಿಸಿ ಹಾಗೂ ಸದರಿ ಅವಧಿಯ ವೇತನ ಭತ್ಯೆ ಪ್ರಮಾಣವನ್ನು ಈಗಾಗಲೇ ನೀಡಲಾಗಿರುವ ಜೀವನಾಂಶ ಭತ್ಯ ಪ್ರಮಾಣಕ್ಕೆ ಸಮಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ. ಶ್ರೀನಿವಾಸ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1877 ಯುವಜನ ಸೇವಾ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಹರಿಹರ ತಾಲ್ಲೂಕು ಕಛೇರಿಗೆ ನೀರಾವರಿ ನಿಗಮದ ಕಟ್ಟಡವನ್ನು ಬಾಡಿಗೆಗೆ ಪಡೆಯುವ ಬಗ್ಗೆ ಮಂಜೂರಾತಿ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಕಂಇ 66 ಡಬ್ಲ್ಯೂಬಿಆರ್ 2009, ದಿನಾಂಕ: 27/03/2010

2. ಪತ್ರ ಸಂಖ್ಯೆ: ಎಡಿಎಂ/ಸಿಆರ್/29/1-12, ದಿನಾಂಕ: 06/06/2011.

**ಪ್ರಸ್ತಾವನೆ :**

ಹರಿಹರ ಪಟ್ಟಣದಲ್ಲಿ ಮಿನಿ ವಿಧಾನಸೌಧ ಕಟ್ಟಡವನ್ನು ನಿರ್ಮಾಣ ಮಾಡಲು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದೆ.

ಜಿಲ್ಲಾಧಿಕಾರಿ, ದಾವಣಗೆರೆ ಜಿಲ್ಲೆ, ದಾವಣಗೆರೆರವರು ಮೇಲೆ (2)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಹರಿಹರ ಪಟ್ಟಣದಲ್ಲಿ ಮಿನಿ ವಿಧಾನಸೌಧವನ್ನು ನಿರ್ಮಾಣ ಮಾಡಲು ತಾಲ್ಲೂಕು ಕಛೇರಿ ಮತ್ತು ಜಾಗವನ್ನು ಕರ್ನಾಟಕ ಗೃಹ ಮಂಡಳಿಗೆ ಹಸ್ತಾಂತರಿಸಲಾಗಿದೆ ಎಂಬ ಪ್ರಯುಕ್ತ ನೀರಾವರಿ ನಿಗಮದ ಅತಿಥಿಗೃಹ ಮತ್ತು ಗೋಡೌನ್‌ಅನ್ನು ಮಾಹೆಯಾನ ರೂ. 24,000.00ಗಳ ಬಾಡಿಗೆ ಆಧಾರದ ಮೇಲೆ ಪಡೆಯಲಾಗಿದೆಯೆಂದು, ಇದಕ್ಕೆ ದಾವಣಗೆರೆ ವಿಭಾಗದ ಕಾರ್ಯಪಾಲಕ ಅಭಿಯಂತರರು ಬಾಡಿಗೆಯನ್ನು ನಿರ್ಧರಿಸಿದ್ದಾರೆಂದು ಪ್ರಯುಕ್ತ ದಿನಾಂಕ: 17/01/2001 ರಿಂದ ಬಾಡಿಗೆಗೆ ಪಡೆದಿರುವುದಕ್ಕೆ ಮಂಜೂರಾತಿಯನ್ನು ನೀಡುವಂತೆ ಹಾಗೂ ರೂ. 2.88.000.00ಗಳ ಅನುದಾನವನ್ನು ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ಎಲ್ಲಾ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಹರಿಹರ ತಾಲ್ಲೂಕು ಕಛೇರಿಗಾಗಿ ಸ್ಥಳೀಯ ನೀರಾವರಿ ನಿಗಮದ ಕಟ್ಟಡವನ್ನು ದಿನಾಂಕ: 17/01/2001 ರಿಂದ ಮಾಹೆಯಾನ ರೂ. 24,000.00 ಗಳ ಬಾಡಿಗೆಗೆ ಪಡೆದಿರುವುದಕ್ಕೆ ಮಂಜೂರಾತಿಯನ್ನು ನೀಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 28 ಎಂಎಸ್‌ಟಿ 2011 ಬೆಂಗಳೂರು, ದಿನಾಂಕ 25-07-2011**

ಹರಿಹರ ತಾಲ್ಲೂಕು ಕಛೇರಿಗಾಗಿ ಸ್ಥಳೀಯ ನೀರಾವರಿ ನಿಗಮದ ಕಟ್ಟಡವನ್ನು ದಿನಾಂಕ: 17/01/2001ರಿಂದ ಮಾಹೆಯಾನ ರೂ. 24,000.00 (ರೂಪಾಯಿ ಇಪ್ಪತ್ತನಾಲ್ಕು ಸಾವಿರಗಳು ಮಾತ್ರ) ಗಳ ದರದಂತೆ ಬಾಡಿಗೆಗೆ ಪಡೆದಿರುವುದಕ್ಕೆ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2053-00-094-7-01-071 (ಕಟ್ಟಡ ವೆಚ್ಚ) (ಯೋಜನೇತರ) ಯಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಯುವಜನ ಸೇವಾ ಮತ್ತು ಕಂದಾಯ ಇಲಾಖೆರವರ ಅನಧಿಕೃತ ಟಿಪ್ಪಣಿ ಸಂಖ್ಯೆ ಕಂಇ 35846 ಐಎಫ್‌ಎ 2011, ದಿನಾಂಕ: 16/07/2011ರಲ್ಲಿ ನೀಡಿರುವ ಸಹಮತಿಯೊಂದಿಗೆ ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ: 10/07/1996ರ ಪ್ರತ್ಯಾಯೋಜಿತ ಅಧಿಕಾರಗಳನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ಶ್ರೀರಾಮರೆಡ್ಡಿ**

ಪಿ.ಆರ್. 1878 ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಸುಧಾರಣಾ ಕೋಶ)

## ಕಂದಾಯ ಸಚಿವಾಲಯ

**ವಿಷಯ :** ಚಿಕ್ಕಬಳ್ಳಾಪುರ ಜಿಲ್ಲಾ ಕಛೇರಿ ಸಂಕೀರ್ಣ ಕಟ್ಟಡದ ಪರಿಷ್ಕೃತ ಕಾಮಗಾರಿ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಕಂಇ 33 ಡಬ್ಲ್ಯೂಬಿಆರ್ 2008, ದಿನಾಂಕ: 08/07/2009.

2. ಪತ್ರ ಸಂಖ್ಯೆ: ಎಡಿಎಂ/ಸಿಆರ್–07/2011–12, ದಿನಾಂಕ: 29/04/2011.

**ಪ್ರಸ್ತಾವನೆ :**

ಚಿಕ್ಕಬಳ್ಳಾಪುರ ಜಿಲ್ಲಾ ಕೇಂದ್ರದಲ್ಲಿ ಜಿಲ್ಲಾ ಕಛೇರಿ ಸಂಕೀರ್ಣ ಕಟ್ಟಡವನ್ನು ರೂ. 20.00 ಕೋಟಿಗಳ ಮತ್ತು ಅಧಿಕಾರಿ ಸಿಬ್ಬಂದಿಗಳ ವಸತಿಗೃಹಗಳನ್ನು ರೂ.5.00 ಕೋಟಿಗಳ ಅಂದಾಜು ವೆಚ್ಚದಲ್ಲಿ ನಿರ್ಮಾಣ ಮಾಡಲು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿತ್ತು.

ಜಿಲ್ಲಾಧಿಕಾರಿ, ಚಿಕ್ಕಬಳ್ಳಾಪುರ ಜಿಲ್ಲೆರವರು ಮೇಲೆ (2)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಜಿಲ್ಲಾ ಕಛೇರಿ ಸಂಕೀರ್ಣ ಕಟ್ಟಡ ಕಾಮಗಾರಿಯ ಮೂಲ ಅಂದಾಜುಪಟ್ಟಿಯಲ್ಲಿ ಕಟ್ಟಡದ ಬಲಬದಿ, ಎಡಬದಿ, ಹಿಂಭಾಗದಲ್ಲಿ ಕೌಂಪೌಂಡ್, ದಾಸ್ತಾನು ಮಳಿಗೆ ಮತ್ತು ಎರಡನೇ ಅಂತಸ್ತಿನಲ್ಲಿ ಹೆಚ್ಚುವರಿ ಕಟ್ಟಡ ಕಾಮಗಾರಿಗಳು ಸೇರ್ಪಡೆಯಾಗಿರುವುದಿಲ್ಲವೆಂದು, ದಿನಾಂಕ: 26/03/2011ರಂದು ಜರುಗಿದ ಪ್ರಗತಿ ಪರಿಶೀಲನಾ ಸಭೆಯಲ್ಲಿ ಸೂಚಿತವಾಗಿರುವಂತೆ ರೂ. 22,57,16,079.12ಗಳ ಕಾಮಗಾರಿ ಅಂದಾಜುಪಟ್ಟಿಯನ್ನು ತಯಾರಿಸಲಾಗಿದೆಯೆಂದು ವರದಿ ಮಾಡುತ್ತಾ, ಅದಕ್ಕೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ಎಲ್ಲಾ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಚಿಕ್ಕಬಳ್ಳಾಪುರ ಜಿಲ್ಲಾ ಕೇಂದ್ರದಲ್ಲಿ ನಿರ್ಮಾಣ ಮಾಡುತ್ತಿರುವ ಜಿಲ್ಲಾ ಕಛೇರಿ ಸಂಕೀರ್ಣ ಕಟ್ಟಡದ ಸುರಕ್ಷತೆ ಮತ್ತು ನಿರ್ವಹಣೆ ದೃಷ್ಟಿಯಿಂದ ಸುತ್ತುಗೋಡೆ ನಿರ್ಮಾಣ ಅವಶ್ಯವಿರುವುದರಿಂದ ರೂ. 2,57,16,079.12ಗಳ ಹೆಚ್ಚುವರಿ ಕಾಮಗಾರಿಗಳನ್ನೊಳಗೊಂಡ ರೂ. 22,57,16,079.12ಗಳ ಪರಿಷ್ಕೃತ ಕಾಮಗಾರಿ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 33 ಡಬ್ಲ್ಯೂಬಿಆರ್ 2008, ಬೆಂಗಳೂರು, ದಿನಾಂಕ: 26/07/2011**

ಚಿಕ್ಕಬಳ್ಳಾಪುರ ಜಿಲ್ಲಾ ಕೇಂದ್ರದಲ್ಲಿ ನಿರ್ಮಾಣ ಮಾಡುತ್ತಿರುವ ಜಿಲ್ಲಾ ಕಛೇರಿಗಳ ಸಂಕೀರ್ಣ ಕಟ್ಟಡದ ಮೂಲ ಕಾಮಗಾರಿ ಅಂದಾಜು ರೂ.20.0 ಕೋಟಿಗಳ ಕಾಮಗಾರಿ ಅಂದಾಜಿಗಿಂತ ಹೆಚ್ಚುವರಿಯಾದ ಕಟ್ಟಡದ ಬಲಬದಿ, ಎಡಬದಿ ಮತ್ತು ಹಿಂಭಾಗಗಳಲ್ಲಿ ಕೌಂಪೌಂಡ್, ದಾಸ್ತಾನು ಮಳಿಗೆ ಮತ್ತು ಎರಡನೇ ಅಂತಸ್ತಿನ ಹೆಚ್ಚುವರಿ ಕಟ್ಟಡ ಕಾಮಗಾರಿಗಳ ರೂ. 2,57,16,079.12ಗಳನ್ನೊಳಗೊಂಡ ಒಟ್ಟು ರೂ.22,57,16,079.12 (ರೂಪಾಯಿ ಇಪ್ಪತ್ತೆರಡುಕೋಟಿ ಐವತ್ತೇಳು ಲಕ್ಷದ ಹದಿನಾರು ಸಾವಿರದ ಎಪ್ಪತ್ತೊಂಭತ್ತು ಮತ್ತು ಹನ್ನೆರಡು ಪೈಸೆ ಮಾತ್ರ)ಗಳ ಪರಿಷ್ಕೃತ ಕಾಮಗಾರಿ ಅಂದಾಜಿಗೆ ಈ ಕೆಳಗಿನ ಷರತ್ತಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

ರೂ. 2,57,16,079.12ಗಳ ಹೆಚ್ಚುವರಿ ಕಾಮಗಾರಿಗಳ ಅಂದಾಜಿಗೆ ಸಕ್ಷಮ ಪ್ರಾಧಿಕಾರದ ತಾಂತ್ರಿಕ ಅನುಮೋದನೆಯನ್ನು ಪಡೆಯತಕ್ಕದ್ದು.

ಈ ಕಾಮಗಾರಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕ ಕಾಯ್ದೆ 1999 ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ನಿಯಮಗಳು 2000 ಪ್ರಕಾರ ಮಾಡತಕ್ಕದ್ದು.

ಇದಕ್ಕೆ ತಗಲುವ ವೆಚ್ಚವನ್ನು 2011–12ನೇ ಸಾಲಿನ 4059–80–051–0–42–386 (ಯೋಜನೆ) ಲೆಕ್ಕಶೀರ್ಷಿಕೆ ಅಡಿಯಲ್ಲಿ ಭರಿಸತಕ್ಕದ್ದು.

ಸಕ್ಷಮ ಪ್ರಾಧಿಕಾರವು ಸದರಿ ಕಟ್ಟಡ ಕಾಮಗಾರಿಯ ಗುಣಮಟ್ಟ ಕಾಯ್ದುಕೊಳ್ಳುವಿಕೆಯನ್ನು ಕಾಲಕಾಲಕ್ಕೆ ಖಾತರಿಪಡಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 157 ವೆಚ್ಚ–7/2010, ದಿನಾಂಕ: 16/07/2011ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ಶ್ರೀರಾಮರೆಡ್ಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣಾ ಕೋಶ).

ಪಿ.ಆರ್: 1879

## ಕಂದಾಯ ಸಚಿವಾಲಯ

**ವಿಷಯ :** ಕಂದಾಯ ಭವನ ಮತ್ತು ಜಿಲ್ಲಾಧಿಕಾರಿಗಳ ಅನೆಕ್ಸ್ ಕಟ್ಟಡದ ಪರಿಷ್ಕೃತ ಕಾಮಗಾರಿ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಕಂಇ 72 ಡಬ್ಲ್ಯೂಬಿಆರ್ 2005, ದಿನಾಂಕ: 25/08/2006.

2. ಸರ್ಕಾರದ ಆದೇಶ ಸಂಖ್ಯೆ: ಕಂಇ 72 ಡಬ್ಲ್ಯೂಬಿಆರ್ 2005, ದಿನಾಂಕ: 12/12/2006.
3. ಸರ್ಕಾರದ ಪತ್ರ ಸಂಖ್ಯೆ: ಕಂಇ 72 ಡಬ್ಲ್ಯೂಬಿಆರ್ 2005, ದಿನಾಂಕ: 07/01/2008.
4. ಸರ್ಕಾರದ ಪತ್ರ ಸಂಖ್ಯೆ: ಕಂಇ 72 ಡಬ್ಲ್ಯೂಬಿಆರ್ 2005, ದಿನಾಂಕ: 25/06/2008.
5. ಸರ್ಕಾರದ ಪತ್ರ ಸಂಖ್ಯೆ: ಕಂಇ 72 ಡಬ್ಲ್ಯೂಬಿಆರ್ 2005, ದಿನಾಂಕ: 22/10/2008.
6. ಸರ್ಕಾರದ ಪತ್ರ ಸಂಖ್ಯೆ: ಕಂಇ 72 ಡಬ್ಲ್ಯೂಬಿಆರ್ 2005, ದಿನಾಂಕ: 16/01/2009.
7. ಸರ್ಕಾರದ ಆದೇಶ ಸಂಖ್ಯೆ: ಕಂಇ 72 ಡಬ್ಲ್ಯೂಬಿಆರ್ 2005, ದಿನಾಂಕ: 14/01/2011.
8. ಸರ್ಕಾರದ ಆದೇಶ ಸಂಖ್ಯೆ: ಕಂಇ 72 ಡಬ್ಲ್ಯೂಬಿಆರ್ 2005, ದಿನಾಂಕ: 14/02/2011.
9. ಪತ್ರ ಸಂಖ್ಯೆ: ಕಗ್ರಮಂ/ಮುಅ/ಕಂದಾಯ ಭವನ/ಜಿ.ಅ.ಕ/1590/2008–2009, ದಿನಾಂಕ: 20/03/2009.

**ಪ್ರಸ್ತಾವನೆ :**

ಬೆಂಗಳೂರು ನಗರದ ಕೆಂಪೇಗೌಡ ರಸ್ತೆಯಲ್ಲಿರುವ ತಾಲ್ಲೂಕು ಕಛೇರಿಯ ಆವರಣದಲ್ಲಿ ಖಾಲಿ ಇರುವ ಮೂರು ಎಕರೆ ನಾಲ್ಕು ಗುಂಟೆ ಜಮೀನಿನಲ್ಲಿ ಕಂದಾಯ ಭವನ ಕಟ್ಟಡವನ್ನು ರೂ.31.00 ಕೋಟಿಗಳ ಅಂದಾಜು ವೆಚ್ಚದಲ್ಲಿ ಕರ್ನಾಟಕ ಗೃಹ ಮಂಡಳಿ ವತಿಯಿಂದ ನಿರ್ಮಾಣ ಮಾಡಲು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬೆಂಗಳೂರು ನಗರದಲ್ಲಿ ಜಿಲ್ಲಾಧಿಕಾರಿಗಳ ಕಛೇರಿ ಆವರಣದಲ್ಲಿ ಕಂದಾಯ ಭವನವನ್ನು ನಿರ್ಮಿಸಲು ಕಾಮಗಾರಿ ಟೆಂಡರಿಗಿಟ್ಟ ಮೊತ್ತ ರೂ.26,90,98,107.00ಗಳ ಟೆಂಡರಿಗೆ ಕನಿಷ್ಠ ಗುತ್ತಿಗೆ ದರ ಶೇಕಡ 17.65 ಹೆಚ್ಚುವರಿಯಾದ ಮೆ॥ ದೇವಿ ಪ್ರಸಾದ್ ಕನ್‌ಸ್ಟ್ರಕ್ಷನ್ ಪ್ರೈವೇಟ್ ಲಿಮಿಟೆಡ್, ಕಾಪುರವರ ಸಂಧಾನದ ನಂತರ ಶೇ.14ರಷ್ಟು ಹೆಚ್ಚುವರಿಯಾದ ರೂ.30,67,71,841.00ಗಳ ಟೆಂಡರ್‌ಗೆ ಸರ್ಕಾರದ ಅನುಮೋದನೆಯನ್ನು ನೀಡಲಾಗಿತ್ತು.

ನಬಾರ್ಡ್ ಸಂಸ್ಥೆಗೆ ಜಮೀನನ್ನು ಮಾರಾಟ ಮಾಡಿದ್ದರಿಂದ ಕ್ರೋಢೀಕೃತವಾದ ರೂ.21.78 ಕೋಟಿಗಳ ಪೈಕಿ ರೂ.5.00 ಕೋಟಿಗಳ ಅನುದಾನವನ್ನು ಮೇಲೆ (3)ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ, ರೂ.7.00 ಕೋಟಿಗಳ ಅನುದಾನವನ್ನು ಮೇಲೆ (4)ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ, ರೂ.4.00 ಕೋಟಿಗಳ ಅನುಧಾನವನ್ನು ಮೇಲೆ (5)ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ಮತ್ತು ರೂ.5.00 ಕೋಟಿಗಳ ಅನುದಾನವನ್ನು ಮೇಲೆ (6)ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ಕರ್ನಾಟಕ ಗೃಹ ಮಂಡಳಿಗೆ ಬಿಡುಗಡೆ ಮಾಡುವಂತೆ ಬೆಂಗಳೂರು ನಗರ ಜಿಲ್ಲಾಧಿಕಾರಿಯವರಿಗೆ ಮಂಜೂರಾತಿಯನ್ನು ನೀಡಲಾಗಿತ್ತು. ಮೇಲೆ (7)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರೂ. 100.00 ಲಕ್ಷಗಳು ಮತ್ತು ಮೇಲೆ (8)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರೂ. 100.00 ಲಕ್ಷಗಳ ಅನುದಾನವನ್ನು ಕರ್ನಾಟಕ ಗೃಹ ಮಂಡಳಿಗೆ ಸರ್ಕಾರವು ಬಿಡುಗಡೆ ಮಾಡಿರುತ್ತದೆ ಇದರಂತೆ ಒಟ್ಟು ರೂ.23.00 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ರವರು ಮೇಲೆ (3)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಕಂದಾಯ ಭವನದ ಕಟ್ಟಡದ ರೂ.31.00 ಕೋಟಿಗಳ ಮೂಲ ಕಾಮಗಾರಿಯ ಅಂದಾಜನ್ನು ರೂ.40,39,61,907.00ಗಳಿಗೆ ಪರಿಷ್ಕರಿಸಿ ಪರಿಷ್ಕೃತ ಕಾಮಗಾರಿ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ ಮತ್ತು ಶ್ರೀ.ಬಿ.ಆರ್. ಶ್ರೀನಿವಾಸಮೂರ್ತಿ, ಪ್ರಾಧ್ಯಾಪಕರು (ನಿವೃತ್ತ) ಭಾರತೀಯ ವಿಜ್ಞಾನ ಸಂಸ್ಥೆ, ಸಲಹೆಗಾರರು ಇವರನ್ನೊಳಗೊಂಡ ತಂಡವು ಕಂದಾಯ ಭವನ ಮತ್ತು ಜಿಲ್ಲಾಧಿಕಾರಿಗಳ ಅನೆಕ್ಸ್ ಕಟ್ಟಡದ ಕಾಮಗಾರಿಯನ್ನು ಪರಿಶೀಲಿಸಿ, ಕೆಲವೊಂದು ಹೆಚ್ಚುವರಿ ಐಟಂಗಳನ್ನು ಒಪ್ಪದೇ ಉಳಿದ ರೂ.4,29,46,471.00ಗಳ ಹೆಚ್ಚುವರಿ ಐಟಂಗಳನ್ನು ಮಾತ್ರ ಶಿಫಾರಸ್ಸು ಮಾಡಿರುತ್ತದೆ. ಅದರಂತೆ, ಕರ್ನಾಟಕ ಗೃಹ ಮಂಡಳಿಯು ತನ್ನ ಆಡಳಿತ ವೆಚ್ಚ, ಇಲಾಖೆಗಳ ಠೇವಣಿಗಳನ್ನೊಳಗೊಂಡಂತೆ ಹೆಚ್ಚುವರಿ ಕಾಮಗಾರಿಗಳ ಮೊತ್ತ ರೂ.6.45ಕೋಟಿಗಳು ಸೇರಿ ರೂ.37.45 ಕೋಟಿಗಳ ಪರಿಷ್ಕೃತ ಕಾಮಗಾರಿ ಅಂದಾಜಿಗೆ ಮಿತಿಗೊಳಿಸಿ ಅಂದಾಜುಪಟ್ಟಿಯನ್ನು ಸಲ್ಲಿಸಿರುತ್ತದೆ.

ವಿಷಯವನ್ನು ಸಂಬಂಧಿಸಿದ ಎಲ್ಲಾ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಬೆಂಗಳೂರು ನಗರದ ಕೆಂಪೇಗೌಡ ರಸ್ತೆಯಲ್ಲಿರುವ ತಾಲ್ಲೂಕು ಕಛೇರಿಯ ಆವರಣದಲ್ಲಿ ನಿರ್ಮಾಣ ಮಾಡುತ್ತಿರುವ ಕಂದಾಯ ಭವನದ ಕಟ್ಟಡದ ರೂ.31.00 ಕೋಟಿಗಳ ಕಾಮಗಾರಿ ಅಂದಾಜನ್ನು ರೂ37.45ಕೋಟಿಗಳ ಪರಿಷ್ಕೃತ ಕಾಮಗಾರಿ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಸರ್ಕಾರವು ತೀರ್ಮಾನಿಸಿ ಈ ಅದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 72 ಡಬ್ಲ್ಯೂಬಿಆರ್ 2005, ಬೆಂಗಳೂರು, ದಿನಾಂಕ: 26/07/2011**

ಬೆಂಗಳೂರು ನಗರದ ಕೆಂಪೇಗೌಡ ರಸ್ತೆಯಲ್ಲಿರುವ ತಾಲ್ಲೂಕು ಕಛೇರಿಯ ಆವರಣದಲ್ಲಿ ಕರ್ನಾಟಕ ಗೃಹ ಮಂಡಳಿ ವತಿಯಿಂದ ನಿರ್ಮಾಣ ಮಾಡುತ್ತಿರುವ ಕಂದಾಯ ಭವನ ಮತ್ತು ಜಿಲ್ಲಾಧಿಕಾರಿಗಳ ಅನೆಕ್ಸ್ ಕಟ್ಟಡದ ಕಾಮಗಾರಿ ಅಂದಾಜನ್ನು ರೂ.31.00 ಕೋಟಿ (ರೂಪಾಯಿ ಮೂವತ್ತೊಂದು ಕೋಟಿಗಳು ಮಾತ್ರ)ಗಳಿಂದ ರೂ.37.45 ಕೋಟಿ (ರೂಪಾಯಿ ಮೂವತ್ತೇಳು ಕೋಟಿ ನಲವತ್ತೈದು ಲಕ್ಷಗಳು ಮಾತ್ರ)ಗಳ ಪರಿಷ್ಕೃತ ಕಾಮಗಾರಿ ಅಂದಾಜಿಗೆ ಸರ್ಕಾರವು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

ಕಂದಾಯ ಭವನ ಮತ್ತು ಜಿಲ್ಲಾಧಿಕಾರಿಗಳ ಕಟ್ಟಡ ಕಾಮಗಾರಿಗೆ ಬಿಡುಗಡೆ ಮಾಡಬೇಕಾದ ಬಾಕಿ ಅನುದಾನ ರೂ.14.45 ಕೋಟಿಗಳನ್ನು ಕರ್ನಾಟಕ ಗೃಹ ಮಂಡಳಿಗೆ ಬಿಡುಗಡೆ ಮಾಡತಕ್ಕದ್ದು.

ಭೂಸ್ವಾಧೀನ ಠೇವಣಿ ಹಣದ ಮೇಲೆ ಸಂಗ್ರಹವಾಗಿರುವ ಬಡ್ಡಿಯ ಮೊತ್ತ ರೂ.31.71 ಕೋಟಿಗಳನ್ನು ಜಿಲ್ಲಾಧಿಕಾರಿಗಳು ಮತ್ತು ಆರಾಧಾನ ಯೋಜನೆಯಡಿ ಬಳಕೆಯಾಗದೆ ಉಳಿದಿರುವ ಮೊತ್ತ ರೂ.26.40 ಕೋಟಿಗಳನ್ನು ಸರ್ಕಾರಕ್ಕೆ ಸಂದಾಯಿಸಿದ ನಂತರವಷ್ಟೇ ಕಂದಾಯ ಭವನದ ಕಾಮಗಾರಿಗೆ ಅನುದಾನವನ್ನು ಬಿಡುಗಡೆ ಮಾಡತಕ್ಕದ್ದು.

ಈ ಕಾಮಗಾರಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ, 1999 ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ನಿಯಮಗಳು 2000ರ ಪ್ರಕಾರ ಮಾಡತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಯುವಜನ ಸೇವಾ ಹಾಗೂ ಕಂದಾಯ ಇಲಾಖೆ ರವರ ಅನಧಿಕೃತ ಟಿಪ್ಪಣಿ ಸಂಖ್ಯೆ ಕಂಇ 37727 ಐಎಫ್‌ಎ 2011, ದಿನಾಂಕ: 23/07/2011ರ ಮತ್ತು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 869 ವೆಚ್ಚ–7/2009, ದಿನಾಂಕ: 16/06/2010ರ ಸಹಮತಿಯೊಂದಿಗೆ ಮತ್ತು ಪ್ರಕರಣ ಸಂಖ್ಯೆ: ಸಿ.179/2011, ದಿನಾಂಕ: 08/07/2011ರ ಸಚಿವ ಸಂಪುಟದ ಅನುಮೋದನೆಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ಶ್ರೀರಾಮರೆಡ್ಡಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಸುಧಾರಣಾ ಕೋಶ)

ಪಿ.ಆರ್: 1880

## ಕಂದಾಯ ಸಚಿವಾಲಯ

**ವಿಷಯ :** ಕಂದಾಯ ಇಲಾಖೆಯಲ್ಲಿ ಶಿರಸ್ತೇದಾರ್ ವೃಂದದಿಂದ ತಹಶೀಲ್ದಾರ್ ಗ್ರೇಡ್–2 ವೃಂದದಿಂದ ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಮುಂಬಡ್ತಿ ನೀಡಲು ಇಲಾಖಾ ಪದೋನ್ನತಿ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 330 ಎಎಸ್‌ಡಿ 2007, ದಿನಾಂಕ: 06/12/2007.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 75 ಸೆನೆನಿ 2010, ಬೆಂಗಳೂರು, ದಿನಾಂಕ: 19/05/2010.
3. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 634 ಎಎಸ್‌ಡಿ 2010, ಬೆಂಗಳೂರು, ದಿನಾಂಕ: 19/10/2010.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 06/12/2007ರ ಆದೇಶದಲ್ಲಿ ಕಂದಾಯ ಇಲಾಖೆಯ ಸೇವೆಗೆ ಸೇರಿದ ಶಿರಸ್ತೇದಾರ್ ವೃಂದದಿಂದ ತಹಶೀಲ್ದಾರ್ ಗ್ರೇಡ್–2 ವೃಂದಕ್ಕೆ ಹಾಗೂ ತಹಶೀಲ್ದಾರ್ ಗ್ರೇಡ್–2 ವೃಂದದಿಂದ ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಮುಂಬಡ್ತಿ ನೀಡುವ ಸಲುವಾಗಿ ಪ್ರಕರಣಗಳನ್ನು ಪರಿಶೀಲಿಸಲು, ಈ ಕೆಳಕಂಡ ಅಧಿಕಾರಿಗಳ ನ್ನೊಳಗೊಂಡಂತೆ ಇಲಾಖಾ ಮುಂಬಡ್ತಿ ಸಮಿತಿಯನ್ನು ರಚಿಸಲಾಗಿರುತ್ತದೆ.

| | | |
|---|---|---|
| 1. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಕಂದಾಯ ಇಲಾಖೆ | ಅಧ್ಯಕ್ಷರು |
| 2. | ಸರ್ಕಾರದ ಕಾರ್ಯದರ್ಶಿಗಳು, (ವಿಪತ್ತು ನಿರ್ವಹಣೆ) | ಸದಸ್ಯರು |
| 3. | ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ | ಸದಸ್ಯರು |
| 4. | ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ | ಸದಸ್ಯರು |
| 5. | ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ | ಸದಸ್ಯರು |
| 6. | ಪ್ರಾದೇಶಿಕ ಆಯುಕ್ತರು, ಗುಲ್ಬರ್ಗಾ | ಸದಸ್ಯರು |
| 7. | ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ದರ್ಜೆ ಇಲ್ಲದಿರುವ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಪ್ರತಿನಿಧಿ | ಸದಸ್ಯರು |
| 8. | ಉಪ ಕಾರ್ಯದರ್ಶಿ (ಸೇವಾ ವಿಷಯ ನಿರ್ವಹಿಸುತ್ತಿರುವ ಅಧಿಕಾರಿ) | ಸದಸ್ಯಕಾರ್ಯದರ್ಶಿ |

ಮೇಲೆ ಓದಲಾದ ಕ್ರಮ ಸಂಖ್ಯೆ (2) ದಿನಾಂಕ: 19/05/2010ರ ಆದೇಶದಲ್ಲಿ ಈ ಕೆಳಕಂಡಂತೆ ಇಲಾಖಾ ಮುಂಬಡ್ತಿ ಸಮಿತಿಯನ್ನು ಪುನರ್ ರಚಿಸಲಾಗಿದೆ.

1. ಕರ್ನಾಟಕ ಆಡಳಿತ ಸೇವೆಯ ಹಿರಿಯ ಶ್ರೇಣಿಗೆ ಸಮನಾದ ಮತ್ತು ಹೆಚ್ಚಿನ ವೇತನ ಶ್ರೇಣಿಯ 'ಎ' ಸಮೂಹದ ಹುದ್ದೆಗಳಿಗೆ ಮುಂಬಡ್ತಿ ನೀಡಲು:
   (ಅ) ಸಂಬಂಧಿಸಿದ ಆಡಳಿತ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ
   (ಆ) ಸಂಬಂಧಿಸಿದ ಇಲಾಖಾ ಮುಖ್ಯಸ್ಥರು:
   (ಇ) ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ಇಲ್ಲದಿರುವ ಸಂಸದೀಯ ವ್ಯವಹಾರ ಮತ್ತು ಶಾಸನ ರಚನಾ ಇಲಾಖೆಯ ಪ್ರತಿನಿಧಿ.
2. ಕರ್ನಾಟಕ ಆಡಳಿತ ಸೇವೆಯ ಹಿರಿಯ ಶ್ರೇಣಿಗೆ ಸಮನಾದ ಹುದ್ದೆಗಳಿಗೆ ಮತ್ತು ತಹಶೀಲ್ದಾರ್ ಗ್ರೇಡ್–2 ಹುದ್ದೆಗಳಿಗೆ ಮುಂಬಡ್ತಿ ನೀಡಲು:
   (ಅ) ಸಂಬಂಧಿಸಿದ ಆಡಳಿತ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ
   (ಆ) ಸಂಬಂಧಿಸಿದ ಇಲಾಖಾ ಮುಖ್ಯಸ್ಥರು:
   (ಇ) ಸಂಬಂಧಿಸಿದ ಸರ್ಕಾರದ ಪ್ರಧಾನ ಕಾರ್ಯದರ್ಶಿ:ಕಾರ್ಯದರ್ಶಿಯವರು ನಾಮ ನಿರ್ದೇಶನ ಮಾಡಿದ ಕರ್ನಾಟಕ ಸರ್ಕಾರದ ಸಚಿವಾಲಯ ಅಧೀನ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ಇಲ್ಲದಿರುವ ಒಬ್ಬ ಅಧಿಕಾರಿ.

ಉಲ್ಲೇಖ (3) ಮೇಲೆ ಓದಲಾದ ಕ್ರಮ ಸಂಖ್ಯೆ (3) ದಿನಾಂಕ: 19/10/2010ರ ಆದೇಶದ ಬಗ್ಗೆ ಸರ್ಕಾರವು ಇಲಾಖಾ ಪದೋನ್ನತಿ ಸಮಿತಿಯನ್ನು ಮತ್ತೊಮ್ಮೆ ಪುನರ್ ರಚಿಸಲು ತೀರ್ಮಾನಿಸಿ ಅದರಂತೆ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 252 ಎಎಸ್‌ಡಿ 2010, ಬೆಂಗಳೂರು, ದಿನಾಂಕ: 23/07/2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕಂದಾಯ ಇಲಾಖೆಯ ಸೇವೆಗೆ ಸೇರಿದ ಶಿರಸ್ತೇದಾರ್ ವೃಂದದಿಂದ ತಹಶೀಲ್ದಾರ್ ಗ್ರೇಡ್–2 ವೃಂದಕ್ಕೆ ಹಾಗೂ ತಹಶೀಲ್ದಾರ್ ಗ್ರೇಡ್–2 ವೃಂದದಿಂದ ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಮುಂಬಡ್ತಿ ನೀಡುವ ಸಲುವಾಗಿ ಪ್ರಕರಣಗಳನ್ನು ಪರಿಶೀಲಿಸಲು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡಂತೆ ಪರಿಷ್ಕೃತ ಇಲಾಖಾ ಮುಂಬಡ್ತಿ ಸಮಿತಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಹೊಸದಾಗಿ ಪುನರ್ ರಚಿಸಿ ಆದೇಶಿಸಿದೆ.

| | | |
|---|---|---|
| 1. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಕಂದಾಯ ಇಲಾಖೆ | ಅಧ್ಯಕ್ಷರು |
| 2. | ಸರ್ಕಾರದ ಕಾರ್ಯದರ್ಶಿಗಳು, (ವಿಪತ್ತು ನಿರ್ವಹಣೆ) | ಉಪಾಧ್ಯಕ್ಷರು |
| 3. | ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ (ಎಲ್ಲಾ ಪ್ರಾದೇಶಿಕ ಆಯುಕ್ತರ ಪರವಾಗಿ) | ಸದಸ್ಯರು |
| 4. | ಅಪರ ಕಾರ್ಯದರ್ಶಿ/ ಉಪ ಕಾರ್ಯದರ್ಶಿ/ಅಧೀನ ಕಾರ್ಯದರ್ಶಿ ಸೇವಾ ನಿಯಮಗಳು (ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.)(ಸೇನಿ) | ವಿಶೇಷ ಆಹ್ವಾನಿತರು |
| 5. | ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ದರ್ಜೆ ಇಲ್ಲದಿರುವ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಪ್ರತಿನಿಧಿ | ವಿಶೇಷ ಆಹ್ವಾನಿತರು |
| 6. | ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ದರ್ಜೆ ಇಲ್ಲದಿರುವ ಸಮಾಜ ಕಲ್ಯಾಣ ಇಲಾಖೆ | ಸದಸ್ಯರು |
| 7. | ಜಂಟಿ ಕಾರ್ಯದರ್ಶಿ/ಉಪ–ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು) | ಸದಸ್ಯಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್. ಗೋಪಾಲಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

ಪಿ.ಅರ್. 1881

## ಕಂದಾಯ ಸಚಿವಾಲಯ

**ವಿಷಯ :** ಶ್ರೀಮತಿ ಸೈಯಿದಾ ಆಫ್ರೀನ್ ಬಾನು ಎಸ್ ಬಳ್ಳಾರಿ, ವಿಶೇಷ ತಹಶೀಲ್ದಾರ್, ಕಿತ್ತೂರು, ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 51 ಎಎಸ್‌ಡಿ 2008, ದಿನಾಂಕ : 23–05–2008.
2. ಶ್ರೀಮತಿ ಸೈಯಿದಾ ಆಫ್ರೀನ್ ಬಾನು ಎಸ್ ಬಳ್ಳಾರಿ, ತಹಶೀಲ್ದಾರ್ ಇವರ ಪತ್ರ ದಿನಾಂಕ : 11–06–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ : 11–06–2008 ರ ಅಧಿಸೂಚನೆಯನ್ವಯ ಶ್ರೀಮತಿ ಸೈಯಿದಾ ಆಫ್ರೀನ್ ಬಾನು ಎಸ್ ಬಳ್ಳಾರಿ, ಇವರು ಕಂದಾಯ ಇಲಾಖೆಯ ತಹಶೀಲ್ದಾರ್, ಗುಂಪು–ಬಿ ಹುದ್ದೆಗೆ ನೇಮಕಗೊಂಡಿರುತ್ತಾರೆ. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ : 11–06–2008ರ ಪತ್ರದಲ್ಲಿ ಸದರಿಯವರು, ಕಂದಾಯ ಇಲಾಖೆಯಲ್ಲಿ ಸೇವೆ ಪ್ರಾರಂಭಿಸುವ ಪೂರ್ವದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕಿಯಾಗಿ ದಿನಾಂಕ : 24–12–2005 ರಿಂದ ಸಲ್ಲಿಸಿರುವ ಸೇವೆಯನ್ನು ನಿವೃತ್ತಿ ವೇತನ ಸೌಲಭ್ಯಗಳಿಗೆ ಪರಿಗಣಿಸುವಂತೆ ಕೋರಿರುತ್ತಾರೆ.

ಶ್ರೀಯುತರ ಮನವಿಯನ್ನು ಹಾಗೂ ಅವರ ಸೇವಾ ಪುಸ್ತಕವನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ಶ್ರೀಮತಿ ಸೈಯಿದಾ ಆಫ್ರೀನ್ ಬಾನು ಎಸ್ ಬಳ್ಳಾರಿ, ಇವರು ಉಪ ನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆಯ ಧಾರವಾಡ ಇವರ ಆದೇಶ ಸಂಖ್ಯೆ : ಇ1/ಸ.ಪ್ರೌ.ವೃಂದ/ಭೌ.ಶಿ/ನೇಮಕ/95/04–05, ದಿನಾಂಕ : 12–12–2005 ರನ್ವಯ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕರಾಗಿ ನೇಮಕಗೊಂಡಿದ್ದು ಇವುಗಳ ನಂತರ ಮುಖ್ಯೋಪಾಧ್ಯಾಯರು ಸರ್ಕಾರಿ ಸಂಯುಕ್ತ ಪ್ರೌಢಶಾಲೆ, ಗುಲಗಂಜಿ ಕೊಪ್ಪ, ಧಾರವಾಡ ಇವರ ಪತ್ರ ಸಂಖ್ಯೆ : ಶ್ರೀಮತಿ ಎಸ್.ಎಸ್.ಬಿ/2008–09, ದಿನಾಂಕ : 31–05–2008 ರನ್ವಯ ದಿನಾಂಕ : 07–06–2008 ರಂದು ಸದರಿ ಸೇವೆಯಿಂದ ಬಿಡುಗಡೆ ಹೊಂದಿರುತ್ತಾರೆ.

ಮೇಲಿನ ಅಂಶಗಳನ್ನು ಪರಿಗಣಿಸಿ ಶ್ರೀಮತಿ ಸೈಯಿದಾ ಆಫ್ರೀನ್ ಬಾನು ಎಸ್ ಬಳ್ಳಾರಿ, ವಿಶೇಷ ತಹಶೀಲ್ದಾರ್ ಕಿತ್ತೂರು, ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ, ಇವರು ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಸಹ ಶಿಕ್ಷಕರಾಗಿ ದಿನಾಂಕ : 24–12–2005 ರಿಂದ ದಿನಾಂಕ : 07–06–2008 ರವರೆಗಿನ ಸೇವಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 224(ಎ) ರನ್ವಯ ಪ್ರಸ್ತುತ ಸೇವೆಗೆ ನಿವೃತ್ತಿ ವೇತನ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ದರಿಸಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 305 ಎಎಸ್‌ಡಿ 2008, ಬೆಂಗಳೂರು, ದಿನಾಂಕ : 22–07–2011**

ಮೇಲೆ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀಮತಿ ಸೈಯಿದಾ ಆಫ್ರೀನ್ ಬಾನು ಎಸ್ ಬಳ್ಳಾರಿ, ವಿಶೇಷ ತಹಶೀಲ್ದಾರ್, ಕಿತ್ತೂರು, ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ ಇವರು ಕಂದಾಯ ಇಲಾಖೆಯ ಸೇವೆಗೆ ಸೇರುವ ಪೂರ್ವದಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಸಹಾಯಕ ಶಿಕ್ಷಕರಾಗಿ ದಿನಾಂಕ : 24–12–2005 ರಿಂದ ದಿನಾಂಕ : 07–06–2008 ರವರೆಗೆ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 224(ಎ) ರೀತ್ಯ ಸದರಿ ಯವರ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ–7) ರವರ ಟಿಪ್ಪಣಿ ಸಂಖ್ಯೆ : ಆ.ಇ. 1035 ವೆಚ್ಚ–7/2009, ದಿನಾಂಕ : 18–11–2009ರಲ್ಲಿ ನೀಡಿರುವ ಸಹಮತದೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್. ಗೋಪಾಲಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 1882

## ಕಂದಾಯ ಸಚಿವಾಲಯ

**ವಿಷಯ :** ಬಳ್ಳಾರಿ ತಾಲ್ಲೂಕು ಮಿಂಚೇರಿ ಮತ್ತು ಹಲಕುಂದಿ ಗ್ರಾಮಗಳ ವಿವಿಧ ಸ.ನಂ.ಗಳ ಒಟ್ಟು ವಿಸ್ತೀರ್ಣ 23.32 ಎಕರೆ ಜಮೀನನ್ನು ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸುವ ಸಲುವಾಗಿ ಮೆ: ಸುಜಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ ರವರಿಗೆ ಗುತ್ತಿಗೆ ನೀಡುವ ಬಗ್ಗೆ.

**ಓದಲಾಗಿದೆ :** 1. ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಬಳ್ಳಾರಿ ರವರ ಪತ್ರ ಸಂಖ್ಯೆ : ಕಂ/ಭೂಮಿ/161/09–10 ದಿನಾಂಕ : 27–10–2010.
2. ಸುತ್ತೋಲೆ ಸಂಖ್ಯೆ : ಆರ್‌ಡಿ : 78 : ಎಲ್‌ಜಿಪಿ : 2009, ದಿನಾಂಕ : 04–01–2011.

**ಪ್ರಸ್ತಾವನೆ :**

1. ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಬಳ್ಳಾರಿ ರವರು ಮೇಲೆ ಓದಲಾದ ದಿನಾಂಕ : 27–10–2010ರ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಬಳ್ಳಾರಿ ಜಿಲ್ಲೆ, ಬಳ್ಳಾರಿ ತಾಲ್ಲೂಕು ಮಿಂಚೇರಿ ಮತ್ತು ಹಲಕುಂದಿ ಗ್ರಾಮಗಳ ವಿವಿಧ ಸ.ನಂ.ಗಳ ಒಟ್ಟು ವಿಸ್ತೀರ್ಣ 23.32 ಎಕರೆ ಜಮೀನನ್ನು

ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸುವ ಸಲುವಾಗಿ ಮೆ: ಸುಜಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ ಬೆಂಗಳೂರು ರವರಿಗೆ ಉಪಗುತ್ತಿಗೆ ನೀಡುವ ಸಂಬಂಧ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

2. ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸುವ ಸಲುವಾಗಿ ಮೆ: ಸುಜಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ ಬೆಂಗಳೂರು ಇವರಿಗೆ ಗುತ್ತಿಗೆ ನೀಡಲು ಪ್ರಸ್ತಾಪಿಸಿರುವ ಮಿಂಚೇರಿ ಮತ್ತು ಹಲಕುಂದಿ ಗ್ರಾಮಗಳ ಜಮೀನು ಈ ಕೆಳಕಂಡಂತೆ ಇರುತ್ತದೆ.

| ಗ್ರಾಮ | ಸ.ನಂ. | ವಿಸ್ತೀರ್ಣ | ವರ್ಗೀಕರಣ |
|---|---|---|---|
| ಮಿಂಚೇರಿ | 229 | 2.10 | ಕಲ್ಲುಮಟ್ಟಿ |
| ಹಲಕುಂದಿ | 474 | 16.90 | ಗಯಾಳು |
| ಹಲಕುಂದಿ | 471 | 04.32 | ಗಯಾಳು |
| | **ಒಟ್ಟು** | **23.32** | |

3. ಮೇಲ್ಕಂಡ ಜಮೀನುಗಳು ಗುತ್ತಿಗೆ ನೀಡಲು ಲಭ್ಯವಿದ್ದು, ಈ ಜಮೀನುಗಳಲ್ಲಿ ಗಾಳಿಯಂತ್ರವನ್ನು ಸ್ಥಾಪಿಸಲು ಗ್ರಾಮಸ್ಥರಿಂದ ಯಾವುದೇ ಆಕ್ಷೇಪಣೆಗಳು ಇರುವುದಿಲ್ಲ. ಗಾಳಿಯಂತ್ರ ಅಳವಡಿಸುವ ಉದ್ದೇಶಕ್ಕೆ ಸದರಿ ಜಮೀನು ಸೂಕ್ತವಾಗಿರುತ್ತದೆ ಎಂದು ತಿಳಿಸಿ ಹಲಕುಂದಿ ಗ್ರಾಮದ ಜಮೀನಿನ ಮಾರುಕಟ್ಟೆ ಬೆಲೆ ಎಕರೆ ಒಂದಕ್ಕೆ ರೂ. 80,107/– ಹಾಗೂ ಮಿಂಚೇರಿ ಗ್ರಾಮದ ಜಮೀನಿನ ಮಾರುಕಟ್ಟೆ ಬೆಲೆ ಎಕರೆ ಒಂದಕ್ಕೆ ರೂ. 23,136/– ಎಂಬುದಾಗಿ ವರದಿ ಮಾಡಿದ್ದಾರೆ.

4. ಇಂಧನ ಇಲಾಖೆಯವರು ಹೊರಡಿಸಿರುವ ಸರ್ಕಾರದ ಆದೇಶ ಸಂಖ್ಯೆ : ಇಎನ್/179/ಎನ್‌ಸಿಇ/2008 ದಿನಾಂಕ : 24–12–2008ರ ಆದೇಶದಲ್ಲಿ ಮೆ: ಸುಜಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ ಬೆಂಗಳೂರು ಇವರಿಗೆ ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸಲು ಬಳ್ಳಾರಿ ಜಿಲ್ಲೆಯ ನೇಮಕಲ್ಲುವಿನಲ್ಲಿ ಅನುಮತಿಸಲಾದ 16 ಮೆ.ವ್ಯಾ. ಸಾಮರ್ಥ್ಯದ ಪವನ್ ವಿದ್ಯುತ್ ಯೋಜನೆಯನ್ನು 27 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

5. ಮೆ: ಸುಜಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ ಬೆಂಗಳೂರು ಇವರಿಗೆ ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸಲು ಗುತ್ತಿಗೆ ಆಧಾರದ ಮೇಲೆ ಮಂಜೂರಾತಿಗಾಗಿ ಪ್ರಸ್ತಾಪಿಸಿರುವ ಮಂಚೇರಿ ಗ್ರಾಮದ ಸ.ನಂ. 229 ರಲ್ಲಿನ ಕಲ್ಲು ಮಟ್ಟಿ ಬಿ **ಖರಾಬು** ಎಂದು ವರ್ಗೀಕೃತವಾಗಿರುವ 13.11 ಎ/ಗು ಹಾಗೂ ಹಲಗುಂಡಿ ಗ್ರಾಮದ ಸ.ನಂ. 474 ರಲ್ಲಿನ 3.05ಎ/ಗು ಮತ್ತು ಸ.ನಂ. 471ರಲ್ಲಿ 13.08 ಎ/ಗು **ಗಯಾಳು** ಎಂಬುದಾಗಿ ವರ್ಗೀಕೃತಗೊಂಡಿರುತ್ತದೆ. ಸದರಿ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ನೀಡುತ್ತಿರುವುದರಿಂದ ಭೂ ಕಂದಾಯ ಕಾಯ್ದೆ ಕಲಂ 68(1)ರಂತೆ **ಬಿ ಖರಾಬು** ಶೀರ್ಷಿಕೆಯಿಂದ ವಿರಹಿತಗೊಳಿಸುವ ಅವಶ್ಯಕತೆ ಕಂಡುಬರುವುದಿಲ್ಲ ಅಲ್ಲದೆ, ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದನಾ ಘಟಕಕ್ಕೆ ಸರ್ಕಾರಿ ಜಮೀನು ಗುತ್ತಿಗೆ ಮೇಲೆ ಕೊಡುತ್ತಿರುವುದರಿಂದ, ಬಿ ಖರಾಬು ಜಮೀನುಗಳ ಲಕ್ಷಣಗಳನ್ನು ಹಾಗೆಯೇ ಉಳಿಸಿಕೊಂಡು ಈ ಸರ್ಕಾರಿ ಜಮೀನುಗಳಿಗೆ ಯಾವುದೇ ರೀತಿ ಹಾನಿಯಾಗದಂತೆ ಮತ್ತು ಒತ್ತುವರಿಯಾಗದಂತೆ ಗಾಳಿಯಂತ್ರ ಘಟಕ ಸ್ಥಾಪನೆ ಸಲುವಾಗಿ ಪ್ರಥಮವಾಗಿ 10 ವರ್ಷ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಸುತ್ತೋಲೆ ಸಂಖ್ಯೆ : ಆರ್‌ಡಿ : 78 : ಎಲ್‌ಜಿಪಿ : 2009 ದಿನಾಂಕ : 04–11–2011 ರಲ್ಲಿನ ಸೂಚನೆಗಳನ್ನು ಪಾಲಿಸಿ ಪ್ರಚಲಿತ ಮಾರುಕಟ್ಟೆ ದರದ ಶೇ 10 ರಷ್ಟು ಗುತ್ತಿಗೆ ದರ ಹಾಗೂ ಪ್ರತಿ 2 ವರ್ಷಗಳಿಗೊಮ್ಮೆ ಶೇ. 10 ರಷ್ಟು ಗುತ್ತಿಗೆ ದರ ಹೆಚ್ಚಿಸುವ ಷರತ್ತುಗೊಳಪಟ್ಟು ಮಂಜೂರು ಮಾಡಲು ತೀರ್ಮಾನಿಸಿದೆ.

6. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಕಂದಾಯ ಇಲಾಖೆಯ ಸುತ್ತೋಲೆಯಲ್ಲಿ ದಿನಾಂಕ : 03–11–2011 ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಇಂಧನ ಇಲಾಖೆಯ ಕೋರಿಕೆಯಂತೆ ಇನ್ನು ಮುಂದೆ ಸರ್ಕಾರಿ ಜಮೀನುಗಳನ್ನು ಗುತ್ತಿಗೆ ಆಧಾರದ ಮೇಲೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಮೂಲಕ ಮಂಜೂರು ಮಾಡುವ ಬದಲಾಗಿ ನೇರವಾಗಿ ಯೋಜನೆ ಕೈಗೊಳ್ಳುವ ಸಂಸ್ಥೆಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ನಿರ್ಣಯಿಸಲಾಗಿರುತ್ತದೆ.

ಬಳ್ಳಾರಿ ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 82 ಎಲ್‌ಜಿಇ 2010, ಬೆಂಗಳೂರು, ದಿನಾಂಕ : 26–07–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆ ಬಳ್ಳಾರಿ ತಾಲ್ಲೂಕು, ಮಿಂಚೇರಿ ಗ್ರಾಮದ ಸ.ನಂ. 229 ರಲ್ಲಿ 2.10 ಎ/ಗು ಹಾಗೂ ಹಲಕುಂದಿ ಗ್ರಾಮದ ಸ.ನಂ. 474 ರಲ್ಲಿ 16.90 ಎ/ಗು ಮತ್ತು ಸ.ನಂ. 471 ರಲ್ಲಿ 4.32 ಎ/ಗು ಒಟ್ಟು 23 ಎಕರೆ 32 ಗುಂಟೆ ಜಮೀನನ್ನು ಬಿ ಖರಾಬು ಜಮೀನುಗಳ ಲಕ್ಷಣಗಳನ್ನು ಹಾಗೇ ಉಳಿಸಿಕೊಂಡು ಈ ಸರ್ಕಾರಿ ಜಮೀನುಗಳಿಗೆ ಯಾವುದೇ ಹಾನಿಯಾಗದಂತೆ ಮತ್ತು ಒತ್ತುವರಿಯಾಗದಂತೆ ಸಂರಕ್ಷಿಸಿಕೊಂಡು, ಪ್ರಚಲಿತ ಮಾರುಕಟ್ಟೆ ದರದ ಶೇ. 10 ರಷ್ಟು ಗುತ್ತಿಗೆ ದರ ಹಾಗೂ ಪ್ರತಿ 2 ವರ್ಷಗಳಿಗೊಮ್ಮೆ ಶೇ. 10 ರಷ್ಟು ಗುತ್ತಿಗೆ ದರ ಹೆಚ್ಚಿಸುವ ಷರತ್ತಿಗೊಳಪಟ್ಟು ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19(3)(ಬಿ) ರನ್ವಯ ಪ್ರಥಮವಾಗಿ 10 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಗಾಳಿಯಂತ್ರದಿಂದ ವಿದ್ಯುತ್ ಉತ್ಪಾದಿಸುವ ಉದ್ದೇಶಕ್ಕಾಗಿ ಮೆ: ಸುಜಲಾನ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ ಬೆಂಗಳೂರು ಇವರಿಗೆ ಗುತ್ತಿಗೆ ನೀಡಲು ಸರ್ಕಾರದ ಅನುಮತಿ ನೀಡಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ : 480 : ವೆಚ್ಚ-7 : 2011 ದಿನಾಂಕ : 16-06-2011 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಜಿ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಮಂಜೂರಾತಿ-3)

ಪಿ.ಆರ್. 1883

## ಕಂದಾಯ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆ ತುಮಕೂರು ತಾಲ್ಲೂಕು, ಕಸಬಾ ಹೋಬಳಿ, ಊರುಕೆರೆ ಗ್ರಾಮದ ಸ.ನಂ. 74 ರಲ್ಲಿ 1.15 ಎಕರೆ ಜಮೀನನ್ನು ಶ್ರೀ ಮಲ್ಲಿಕಾರ್ಜುನ ಸ್ವಾಮಿ ವಿದ್ಯಾ ಸಂಸ್ಥೆ (ರಿ) ಗವಿಮಠ ಬೆಟ್ಟದಹಳ್ಳಿ, ಗುಬ್ಬಿ ತಾಲ್ಲೂಕು ಇವರಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ಬೆಂಗಳೂರು ರವರ ಪತ್ರ ಸಂಖ್ಯೆ : ಎಲ್ಎನ್‌ಡಿ/ಸಿಆರ್/66/10-11 ದಿನಾಂಕ : 07-09-2010.

**ಪ್ರಸ್ತಾವನೆ :**

1. ಮೇಲೆ ಓದಲಾದ (1)ರ ಪತ್ರದಲ್ಲಿ ಪ್ರಾದೇಶಿಕ ಆಯುಕ್ತರು ಬೆಂಗಳೂರು ವಿಭಾಗ ಬೆಂಗಳೂರು ರವರ ವರದಿಯನ್ವಾಧರಿಸಿ ತುಮಕೂರು ತಾಲ್ಲೂಕು, ಕಸಬಾ ಹೋಬಳಿ, ಊರುಕೆರೆ ಗ್ರಾಮದ ಸ.ನಂ. 74ರಲ್ಲಿ 1.15 ಎಕರೆ ಜಮೀನು 15 ವರ್ಷಗಳಿಂದ ಸದರಿ ಸಂಸ್ಥೆಯ ಅನುಭವದಲ್ಲಿದ್ದು, ಈ ಜಮೀನಿನಲ್ಲಿ ಒಂದು ಅನಾಥ ಆಶ್ರಮವನ್ನು ತೆರೆಯಲಾಗಿದ್ದು, ಸಾವಿರಾರು ಅನಾಥ ಮಕ್ಕಳಿಗೆ ಊಟ, ವಸತಿ, ವಿದ್ಯಾಭ್ಯಾಸ ಉಚಿತವಾಗಿ ನೀಡುತ್ತಿರುವುದರಿಂದ, ಈ ಜಮೀನನ್ನು ಮಂಜೂರು ಮಾಡಬೇಕೆಂದು ಸಂಸ್ಥೆಯ ಅಧ್ಯಕ್ಷರಾದ ಶ್ರೀ ಚಂದ್ರಶೇಖರ ಸ್ವಾಮೀಜಿಗಳ ಕೋರಿಕೆಯಾಗಿರುತ್ತದೆ.

2. ಊರುಕೆರೆ ಗ್ರಾಮದ ಸ.ನಂ. 74ರಲ್ಲಿ ಒಟ್ಟು 16.25 ಎಕರೆ ಜಮೀನಿದ್ದು, ಇದು ಕಂದಾಯ ದಾಖಲೆಗಳಂತೆ ಗೋಮಾಳ ಎಂಬುದು ವರ್ಗೀಕರಣಗೊಂಡಿರುತ್ತದೆ. ಈ ಪೈಕಿ ಗ್ರಾಮ ನಿವೇಶನಕ್ಕಾಗಿ 3.12 ಎಕರೆ ಶ್ರೀ ಶನಿದೇವರ ದೇವಾಲಯ ಸಮಿತಿಗಾಗಿ 0.05 ಗುಂಟೆ, ಸಾರ್ವಜನಿಕ ಸ್ಮಶಾನಕ್ಕಾಗಿ 0.15 ಗುಂಟೆ ಹಾಗೂ ಜಿಲ್ಲಾ ತರಬೇತಿ ಸಂಸ್ಥೆ ಕಟ್ಟಡಕ್ಕಾಗಿ 3.20 ಎಕರೆ ಜಮೀನು ಮಂಜೂರಾಗಿರುತ್ತದೆ. ಇನ್ನು 1.15 ಎಕರೆ ಸಂಸ್ಥೆಯ ಸ್ವಾಧೀನದಲ್ಲಿದ್ದು, ಸಂಸ್ಥೆಯ ವತಿಯಿಂದ ಈಗಾಗಲೇ ಶಾಲಾ ಕಟ್ಟಡ ನಿರ್ಮಾಣವಾಗಿರುತ್ತದೆ. ಸಂಸ್ಥೆಯು ಸದರಿ ಜಾಗದಲ್ಲಿ ಹಿಂದಿನಿಂದಲೂ ಅನಾಥಾಶ್ರಮ ನಡೆಸಿಕೊಂಡು ಬರುತ್ತಿದೆ. ಸದರಿ ಜಮೀನು ವ್ಯವಸಾಯಕ್ಕೆ ಯೋಗ್ಯವಾದ ಜಮೀನಾಗಿರುವುದಿಲ್ಲ. ರಾಷ್ಟ್ರೀಯ ಹೆದ್ದಾರಿಯಿಂದ 3 ಕಿ.ಮಿ. ದೂರದಲ್ಲಿದೆ. ಸದರಿ ಜಮೀನಿನಲ್ಲಿ ಅಧಿಕ ವಿದ್ಯುತ್ ವಾಹಕ ತಂತಿ, ಬಂಡಿ ದಾರಿ ಸಂಪರ್ಕ ರಸ್ತೆಗಳು, ಕೆರೆ ಕಟ್ಟೆಗಳಿಗಾಗಿ ಕಾಯ್ದಿರಿಸುವ ಪ್ರದೇಶವಾಗಿರುವುದಿಲ್ಲ. ಜಮೀನನ್ನು ಈ ಸಂಸ್ಥೆಗೆ ಮಂಜೂರು ಮಾಡಲು ಸಾರ್ವಜನಿಕರ ಹಾಗೂ ಗ್ರಾಮಸ್ಥರ ತಕರಾರು ಇರುವುದಿಲ್ಲ. ಸದರಿ ಜಮೀನಿನ ಬೆಲೆ ಉಪನೋಂದಣಾಧಿಕಾರಿಗಳ ಮೌಲ್ಯ ನಿರ್ಧಾರ ಸಮಿತಿಯ ಅಭಿಪ್ರಾಯದಂತೆ ಎಕರೆ ಒಂದಕ್ಕೆ ರೂ. 1,00,000/- ಗಳಿರುತ್ತದೆಂದು ವರದಿಸಿರುತ್ತಾರೆ. ಆದರೆ ಮಾರ್ಗಸೂಚಿ ಬೆಲೆಯ ದಾಖಲೆಯಂತೆ ಖುಷ್ಕಿ ಜಮೀನು ರೂ. 4,00,000/- ಇರುತ್ತದೆಂಬುದಾಗಿ ವರದಿ ಮಾಡಿದ್ದಾರೆ.

3. ಶ್ರೀ ಮಲ್ಲಿಕಾರ್ಜುನಸ್ವಾಮಿ ವಿದ್ಯಾ ಸಂಸ್ಥೆ (ರಿ) ಗವಿಮಠ ಬೆಟ್ಟದಹಳ್ಳಿ, ಇದೊಂದು ಧಾರ್ಮಿಕ ಸಂಸ್ಥೆಯಾಗಿದ್ದು, ಈ ಸಂಸ್ಥೆಯು ಅನೇಕ ಶಿಕ್ಷಣ ಸಂಸ್ಥೆಗಳನ್ನು ಮತ್ತು ಅನಾಥಾಶ್ರಮಗಳನ್ನು ನಿರ್ವಹಿಸುತ್ತಿದ್ದು, ಅನಾಥ ಮಕ್ಕಳಿಗೆ ಯಾವುದೇ ಜಾತಿ ಬೇದವಿಲ್ಲದೆ ಉಚಿತವಾಗಿ ವಿದ್ಯಾಭ್ಯಾಸ, ಊಟ, ವಸತಿ ಸೌಕರ್ಯ ಕಲ್ಪಿಸುವ ಮೂಲಕ ಶೈಕ್ಷಣಿಕವಾಗಿ ಸಾರ್ವಜನಿಕ ಸೇವಾ ಕಾರ್ಯಗಳನ್ನು ನಿರ್ವಹಿಸುತ್ತಿದೆ. ಸದರಿ ಸಂಸ್ಥೆಯು ಸಹಕಾರ ಸಂಘಗಳ ಕಾಯ್ದೆಯಡಿಯಲ್ಲಿ ದಿನಾಂಕ : 21-10-1980 ರಂದು ನೋಂದಣಿಯಾಗಿರುತ್ತದೆ. ಸಂಸ್ಥೆಯ ಆರ್ಥಿಕ ವಹಿವಾಟಿನ ಬಗ್ಗೆ ಹಿಂದಿನ ಐದು ವರ್ಷಗಳ ಲೆಕ್ಕ ತಪಾಸಣಾ ವರದಿಯನ್ನು ಹಾಜರುಪಡಿಸಿದ್ದಾರೆ. ಶ್ರೀ ಮಲ್ಲಿಕಾರ್ಜುನಸ್ವಾಮಿ ವಿದ್ಯಾ ಸಂಸ್ಥೆಯವರಿಗೆ ಮಂಜೂರಾತಿಗಾಗಿ ಪ್ರಸ್ತಾಪಿಸಿರುವ ಜಮೀನು ಗೋಮಾಳವೆಂದು ವರ್ಗೀಕೃತಗೊಂಡಿದ್ದು, ಈ ಗ್ರಾಮದಲ್ಲಿ 303 ರಾಸುಗಳಿದ್ದು ಗ್ರಾಮದಲ್ಲಿ 8.13 ಎಕರೆ ಗೋಮಾಳವಿದ್ದು, ರಾಸುಗಳಿಗನುಗುಣವಾಗಿ ಗೋಮಾಳ ಲಭ್ಯವಿರುವುದಿಲ್ಲ. ಸದರಿ ಸಂಸ್ಥೆಯು ಉಚಿತವಾಗಿ ಅನಾಥಾಶ್ರಮ ನಡೆಸುತ್ತಿದ್ದು, ಸಾರ್ವಜನಿಕ ಉದ್ದೇಶದಿಂದ ಅನಾಥ ಮಕ್ಕಳ ಮತ್ತು ಸಾರ್ವಜನಿಕವಾಗಿ ಇನ್ನು ಹೆಚ್ಚಿನ ಸೇವಾ ಕಾರ್ಯಗಳನ್ನು ಸಲ್ಲಿಸುವ ಸಾರ್ವಜನಿಕ ಹಿತದೃಷ್ಟಿಯಿಂದ ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ, ಸದರಿ 1.15 ಎಕರೆ ಜಮೀನನ್ನು ಕರ್ನಾಟಕ ಭೂಮಂಜೂರಾತಿ ನಿಯಮಗಳು 1969ರ ನಿಯಮ 21 ರನ್ವಯ ಸದರಿ ಜಮೀನಿನ ಮಾರುಕಟ್ಟೆ ಬೆಲೆ ಹಾಗೂ ಇತರ ಶುಲ್ಕಗಳನ್ನು ವಿಧಿಸಿ, ಮತ್ತು ಸರ್ಕಾರಿ ಜಮೀನಿನಲ್ಲಿ ಅನಧಿಕೃತವಾಗಿ ಕಟ್ಟಡ ಕಟ್ಟಿರುವ ಬಗ್ಗೆ ಹಾಗೂ ಜಮೀನನ್ನು ವ್ಯವಸಾಯೇತರ ಉದ್ದೇಶಕ್ಕೆ ಬಳಸುತ್ತಿರುವ ಕುರಿತು ದಂಡ ಮತ್ತು ಭೂಪರಿವರ್ತನಾ ಶುಲ್ಕ ಪಾವತಿಸುವ ಷರತ್ತಿಗೊಳಪಡಿಸಿ, ತುಮಕೂರು ತಾಲ್ಲೂಕು ಕಸಬಾ ಹೋಬಳಿ, ಊರುಕೆರೆ ಗ್ರಾಮದ ಸ.ನಂ. 74ರಲ್ಲಿ 1.15 ಎಕರೆ ಜಮೀನನ್ನು ಶ್ರೀ ಮಲ್ಲಿಕಾರ್ಜುನಸ್ವಾಮಿ ವಿದ್ಯಾ ಸಂಸ್ಥೆಗೆ ಮಂಜೂರು ಮಾಡಲು ಕೋರಿರುತ್ತಾರೆ.

4. ಪ್ರಾದೇಶಿಕ ಆಯುಕ್ತರು ಬೆಂಗಳೂರು ವಿಭಾಗ ಬೆಂಗಳೂರು ರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 63 ಎಲ್‌ಜಿಟಿ 2010, ಬೆಂಗಳೂರು, ದಿನಾಂಕ : 23-07-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಕಸಬಾ ಹೋಬಳಿ, ಊರುಕೆರೆ ಗ್ರಾಮದ ಸ.ನಂ. 74ರಲ್ಲಿ 1.15 ಎಕರೆ ಜಮೀನನ್ನು ಕರ್ನಾಟಕ ಭೂಕಂದಾಯ ನಿಯಮಗಳು 1966ರ ನಿಯಮ 97(4)ರಡಿಯಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಸದರಿ 1.15 ಎಕರೆ ಜಮೀನನ್ನು ಕರ್ನಾಟಕ ಭೂಮಂಜೂರಾತಿ ನಿಯಮಗಳು 1969ರ ನಿಯಮ 21ರನ್ವಯ ಸದರಿ ಜಮೀನಿನ ಮಾರುಕಟ್ಟೆ ಬೆಲೆ ಹಾಗೂ ಇತರ ಶುಲ್ಕಗಳನ್ನು ವಿಧಿಸಿ, ದಂಡ ಮತ್ತು ಭೂಪರಿವರ್ತನಾ ಶುಲ್ಕ ಪಾವತಿಸುವ ಷರತ್ತಿಗೊಳಪಡಿಸಿ, ಶ್ರೀ ಮಲ್ಲಿಕಾರ್ಜುನಸ್ವಾಮಿ

ವಿದ್ಯಾ ಸಂಸ್ಥೆ (ರಿ) ಗವಿಮಠ ಬೆಟ್ಟದಹಳ್ಳಿ, ಗುಬ್ಬಿ ತಾಲ್ಲೂಕು ಇವರಿಗೆ ಶೈಕ್ಷಣಿಕ ಉದ್ದೇಶ ಹಾಗೂ ಇತರೆ ಧಾರ್ಮಿಕ ಚಟುವಟಿಕೆಗಳನ್ನು ನಡೆಸುವ ಉದ್ದೇಶಕ್ಕಾಗಿ ಮಂಜೂರು ಮಾಡಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ : 888 : ವೆಚ್ಚ-7/2010 ದಿನಾಂಕ : 16-12-2010ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಜಿ. ಲಕ್ಷ್ಮೀನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1884 ಕಂದಾಯ ಇಲಾಖೆ (ಭೂ ಮಂಜೂರಾತಿ-3)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ ಅಫಜಲಪುರ ತಾಲ್ಲೂಕಿನ ಗೌಡಗಾಂವ ಗ್ರಾಮದ ಹತ್ತಿರ ಅಮರ್ಜಾ ನದಿಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :**
1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ ಜಿಜಾಪುರರವರ ಪತ್ರದ ಕ್ರಮಾಂಕ : ಮುಇಂ/ಸನೀ(ಉ)ವಲಯ/ಬಿಜೆಪಿ/ಪಿಬಿ-5/2011-12/3354 ದಿನಾಂಕ : 23-06-2011.
2. ಸರ್ಕಾರದ ಆದೇಶ ಸಂಖ್ಯೆ : ಸನೀಇ 236 ಮಸಾವಿ 2009(2), ದಿನಾಂಕ : 19-08-2010.

**ಪ್ರಸ್ತಾವನೆ :**

ಗುಲ್ಬರ್ಗಾ ಜಿಲ್ಲೆ ಅಫಜಲಪುರ ತಾಲ್ಲೂಕಿನ ಗೌಡಗಾಂವ ಗ್ರಾಮದ ಹತ್ತಿರ ಅಮರ್ಜಾ ನದಿಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಉಲ್ಲೇಖ (2)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 18-11-2010 |
| ಜಿಲ್ಲಾ ಟೆಂಡರ್ ಬುಲೆಟಿನ್ | 12-11-2010 |
| ಕರ್ನಾಟಕ ರಾಜ್ಯ ಪತ್ರ | 18-11-2010 |
| ಪ್ರಜಾವಾಣಿ ದಿನಪತ್ರಿಕೆ | 12-11-2010 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು, ಇವರ ಪೈಕಿ ಒಬ್ಬರು ಮಾತ್ರ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ : 06-06-2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,14,55,747/- |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 1,63,27,450/- |
| ಕ್ರ.ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಶ್ರೀ ಸತೀಶ ವಿ. ಗುತ್ತೇದಾರ, ಪ್ರಥಮ ದರ್ಜೆ ಗುತ್ತಿಗೆದಾರರು | 1,92,16,851/- | 67.75 ಹೆಚ್ಚು | 17.70 ಹೆಚ್ಚು |

ಮೇಲ್ಕಂಡಂತೆ ಶ್ರೀ ಸತೀಶ ವಿ. ಗುತ್ತೇದಾರ, ಪ್ರಥಮ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 17.70 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರನ್ನು ಅಂಗೀಕರಿಸುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,63,27,450/-ಗಳ ಮೇಲೆ ಶೇ. 12.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,82,86,744/-ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 51 ಅಪಿಬಂ (ತಾಂತ್ರಿಕ) 2011, ಬೆಂಗಳೂರು, ದಿನಾಂಕ : 23-07-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಗುಲ್ಬರ್ಗಾ ಜಿಲ್ಲೆ ಅಫಜಲಪುರ ತಾಲ್ಲೂಕಿನ ಗೌಡಗಾಂವ ಗ್ರಾಮದ ಹತ್ತಿರ ಅಮರ್ಜಾ ನದಿಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 1,63,27,450/-ಗಳ ಮೇಲೆ ಶೇ. 12.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 1,82,86,744/- (ಒಂದು ಕೋಟಿ ಎಂಭತ್ತೆರಡು ಲಕ್ಷದ

ಎಂಭತ್ತಾರು ಸಾವಿರದ ಏಳು ನೂರ ನಲ್ವತ್ತನಾಲ್ಕು ರೂಪಾಯಿಗಳು ಮಾತ್ರ) ಶ್ರೀ ಸತೀಶ ವಿ. ಗುತ್ತೇದಾರ, ಪ್ರಥಮ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20-01-2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1885 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ :** ಪ್ರೊ. ಸೈಯಿದ ಅಖ್ತರ್, ಪ್ರಾಧ್ಯಾಪಕರು, ಶಿಕ್ಷಣ ವಿಭಾಗ, ಗುಲ್ಬರ್ಗ ವಿಶ್ವವಿದ್ಯಾಲಯ, ಇವರ ವಿದೇಶ ಪ್ರಯಾಣದ ಬಗ್ಗೆ.

**ಓದಲಾಗಿದೆ :**
1. ಗುಲ್ಬರ್ಗ ವಿಶ್ವವಿದ್ಯಾಲಯದ ಪತ್ರ ಸಂಖ್ಯೆ. GUG/ADM/EST-1(T)2010-11/2147, ದಿನಾಂಕ : 21-10-2010.
2. ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ. ಇಡಿ 154 ಯುಜಿವಿ 2010, ದಿನಾಂಕ : 09-06-2011.
3. ಗುಲ್ಬರ್ಗ ವಿಶ್ವವಿದ್ಯಾಲಯದ ಪತ್ರ ಸಂಖ್ಯೆ. ಗುವಿಗು/ಆಡಳಿತ-1/2011-12/639, ದಿನಾಂಕ : 20/21-06-2011.

**ಪ್ರಸ್ತಾವನೆ :**

ಪ್ರೊ. ಸಯಿದಾ ಅಖ್ತರ್, ಪ್ರಾಧ್ಯಾಪಕರು, ದೈಹಿಕ ಶಿಕ್ಷಣ ವಿಭಾಗ, ಇವರು ಗುಲ್ಬರ್ಗ ವಿಶ್ವವಿದ್ಯಾಲಯಕ್ಕೆ ಮನವಿ ಸಲ್ಲಿಸಿ, ಸದರಿಯವರು ಸೌದಿ ಅರೇಬಿಯಾದ ಷಕ್ರಾ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕ ಹುದ್ದೆಗೆ ಆಯ್ಕೆಯಾಗಿರುವುದರಿಂದ, ಅಲ್ಲಿಗೆ ಕೆಲಸಕ್ಕೆ ಸೇರಿಕೊಳ್ಳಲು ಅಸಾಧಾರಣ ರಜೆಯನ್ನು ಮಂಜೂರು ಮಾಡುವಂತೆ ಕೋರಿದ್ದರ ಹಿನ್ನೆಲೆಯಲ್ಲಿ, ವಿಷಯವನ್ನು ದಿನಾಂಕ : 26-08-2010ರ ಸಿಂಡಿಕೇಟ್ ಸಭೆಯಲ್ಲಿ ಮಂಡಿಸಿ, ಸಿಂಡಿಕೇಟ್ ಸಭೆಯು ಡಾ: ಸಯಿದಾ ಅಖ್ತರ್‌ರವರಿಗೆ ಎರಡು ವರ್ಷಗಳ ಅಸಾಧಾರಣ ರಜೆಯನ್ನು ಮಂಜೂರು ಮಾಡಲು ತೀರ್ಮಾನಿಸಿದ್ದು, ಅದರಂತೆ ಅವರಿಗೆ ತಿಳಿಸಲಾಗಿದೆ ಹಾಗೂ ನಂತರ ವಿಶ್ವವಿದ್ಯಾಲಯದಿಂದ ಬಿಡುಗಡೆಗೊಳಿಸದ ಹೊರತು, ಕೇಂದ್ರ ಸ್ಥಾನವನ್ನು ಬಿಟ್ಟು ವಿದೇಶಕ್ಕೆ ಪ್ರಯಾಣ ಮಾಡಕೂಡದು ಎಂದು ಡಾ: ಸಯಿದಾ ಅಖ್ತರ್‌ರವರಿಗೆ ಅಧ್ಯಯನ ವಿಭಾಗದ ಮುಖ್ಯಸ್ಥರ ಮೂಲಕ ತಿಳಿಸಲಾಗಿತ್ತು ಎಂದು ಗುಲ್ಬರ್ಗ ವಿಶ್ವವಿದ್ಯಾಲಯವು ಮೇಲೆ ಓದಲಾದ (1)ರ ಪತ್ರದಲ್ಲಿ ವರದಿ ಮಾಡುತ್ತಾ, ಈ ಮಧ್ಯೆ, ಪ್ರೊ. ಸಯಿದಾ ಅಖ್ತರ್‌ರವರು ತಮಗೆ ವಿಶ್ವವಿದ್ಯಾಲಯವು ದಿನಾಂಕ : 11-10-2010 ರಿಂದ ಅನ್ವಯವಾಗುವಂತೆ ಎರಡು ವರ್ಷಗಳ ಅಸಾಧಾರಣ ರಜೆಯನ್ನು ಮಂಜೂರು ಮಾಡಿರುವುದರಿಂದ ವಿಶ್ವವಿದ್ಯಾಲಯದಿಂದ ಬಿಡುಗಡೆ ಹೊಂದದೆ ವಿದೇಶಕ್ಕೆ ತೆರಳಿರುವುದಾಗಿ ಪತ್ರದ ಮೂಲಕ ತಿಳಿಸಿರುತ್ತಾರಾದ್ದರಿಂದ, ಈ ವಿಷಯದಲ್ಲಿ ವಿಶ್ವವಿದ್ಯಾಲಯವು ಯಾವ ಕ್ರಮವನ್ನು ಜರುಗಿಸಬಹುದು ಎಂಬ ಬಗ್ಗೆ ಗುಲ್ಬರ್ಗ ವಿಶ್ವವಿದ್ಯಾಲಯವು ಮೇಲೆ ಓದಲಾದ (1)ರ ಪತ್ರದಲ್ಲಿ ಸರ್ಕಾರದ ಸಲಹೆಯನ್ನು ಕೋರಿರುತ್ತದೆ.

2. ಪ್ರೊ. ಸಯಿದಾ ಅಖ್ತರ್, ಪ್ರಾಧ್ಯಾಪಕರು, ಶಿಕ್ಷಣ ವಿಭಾಗ, ಗುಲ್ಬರ್ಗ ವಿಶ್ವವಿದ್ಯಾಲಯ ಇವರು ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ಬಿಜಾಪುರ ಇಲ್ಲಿ ಕುಲಪತಿಗಳಾಗಿದ್ದ ಅವಧಿಯಲ್ಲಿ ನಡೆಸಲಾದ ಅಕ್ರಮ/ಅವ್ಯವಹಾರಗಳ ಬಗ್ಗೆ ವಿಚಾರಣೆ ಬಾಕಿ ಇರುವಾಗ ಗುಲ್ಬರ್ಗ ವಿಶ್ವವಿದ್ಯಾಲಯದ ಸಿಂಡಿಕೇಟ್ ಸಭೆಯು ದಿನಾಂಕ : 26-08-2010ರ ಸಭೆಯಲ್ಲಿ ಅಸಾಧಾರಣ ರಜೆ ಮಂಜೂರು ಮಾಡಿರುವ ನಿರ್ಣಯವು ನಿಯಮಬಾಹಿರವಾಗಿದ್ದು, ಈ ನಿರ್ಣಯವನ್ನು ಏಕೆ ರದ್ದುಗೊಳಿಸಬಾರದು ಎಂಬ ಬಗ್ಗೆ ವಿವರಣೆಯನ್ನು ಒಂದು ವಾರದೊಳಗೆ ಸರ್ಕಾರಕ್ಕೆ ಸಲ್ಲಿಸುವಂತೆಯೂ ಹಾಗೂ ಒಂದು ವೇಳೆ ನಿಗದಿತ ಅವಧಿಯೊಳಗೆ ಯಾವುದೇ ಉತ್ತರ ಬಾರದಿದ್ದರೆ ಏಕಪಕ್ಷೀಯವಾಗಿ ನಿರ್ಧಾರ ಕೈಗೊಳ್ಳಲಾಗುವುದು ಎಂದು ಗುಲ್ಬರ್ಗ ವಿಶ್ವವಿದ್ಯಾಲಯಕ್ಕೆ ಮೇಲೆ ಓದಲಾದ (2)ರ ಸರ್ಕಾರಿ ಪತ್ರದಲ್ಲಿ ಕಾರಣ ಕೇಳುವ ನೋಟೀಸನ್ನು ಹೊರಡಿಸಲಾಗಿತ್ತು.

3. ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಗುಲ್ಬರ್ಗ ವಿಶ್ವವಿದ್ಯಾಲಯವು ಪ್ರೊ. ಸಯಿದಾ ಅಖ್ತರ್ ರವರು ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ಬಿಜಾಪುರ ಇಲ್ಲಿ ಕುಲಪತಿಗಳಾಗಿದ್ದ ಸಮಯದಲ್ಲಿ ನಡೆಸಲಾದ ಅಕ್ರಮ/ಅವ್ಯವಹಾರಗಳ ಬಗ್ಗೆ ವಿಚಾರಣೆ ಬಾಕಿ ಇರುವ ಬಗ್ಗೆ ವಿಶ್ವವಿದ್ಯಾಲಯಕ್ಕೆ ಯಾವುದೇ ಅಧಿಕೃತ ಮಾಹಿತಿ ಇಲ್ಲದಿದ್ದುದರಿಂದ, ದಿನಾಂಕ : 26-08-2011ರ ಸಿಂಡಿಕೇಟ್ ಸಭೆಯಲ್ಲಿ ಸದರಿಯವರಿಗೆ ಎರಡು ವರ್ಷಗಳ ಅಸಾಧಾರಣ ರಜೆಯನ್ನು ಮಂಜೂರು ಮಾಡಲು ನಿರ್ಣಯಿಸಿದ್ದು, ಈ ನಿರ್ಣಯವು ನಿಯಮಬಾಹಿರವಾಗಿದ್ದಲ್ಲಿ ಸರ್ಕಾರವು ರದ್ದುಗೊಳಿಸಬಹುದು ಎಂದು ವರದಿ ಮಾಡಿದೆ. ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಇಡಿ 154 ಯುಜಿವಿ 2010, ಬೆಂಗಳೂರು, ದಿನಾಂಕ : 29-07-2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಪ್ರೊ. ಸಯಿದಾ ಅಖ್ತರ್, ಪ್ರಾಧ್ಯಾಪಕರು, ದೈಹಿಕ ಶಿಕ್ಷಣ ವಿಭಾಗ, ಗುಲ್ಬರ್ಗ ವಿಶ್ವವಿದ್ಯಾಲಯ ಇವರ ವಿರುದ್ಧದ ವಿಚಾರಣೆ ಬಾಕಿ ಇರುವಾಗ ಇವರಿಗೆ ಎರಡು ವರ್ಷಗಳ ಅಸಾಧಾರಣ ರಜೆಯನ್ನು ಮಂಜೂರು ಮಾಡಲು ದಿನಾಂಕ :

26-08-2010ರ ಸಭೆಯಲ್ಲಿ ಗುಲ್ಬರ್ಗ ವಿಶ್ವವಿದ್ಯಾಲಯದ ಸಿಂಡಿಕೇಟ್ ಕೈಗೊಂಡಿರುವ ನಿರ್ಣಯವು ನಿಯಮಬಾಹಿರವಾಗಿದ್ದು, ಸದರಿ ನಿರ್ಣಯವನ್ನು ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ರ ನಿಯಮ 10(1)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಯು.ಬಿ. ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1886 ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಫ್. ಆರ್. ಪಾಟೀಲ್, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಗುಲ್ಬರ್ಗ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247 (ಎ)(1)ರ ಸೌಲಭ್ಯಕ್ಕೆ ಪರಿಗಣಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ-II ಸಂ : ಲಾ 161 ಪಿಪಿಇ 86, ದಿನಾಂಕ : 24-07-1989.
2. ಸರ್ಕಾರದ ಪತ್ರ ಸಂಖ್ಯೆ : ಲಾ 90 ಪಿಪಿಇ 91, ದಿನಾಂಕ : 20-11-1991.
3. ಶ್ರೀ ಎಫ್.ಆರ್. ಪಾಟೀಲ್ ಇವರ ಮನವಿಯ ದಿನಾಂಕ : 06-03-2009.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ : ಡಿಪಿಎನ್/ಲೆಕ್ಕ-1/432/2008-09, ದಿನಾಂಕ : 13-04-2009.

**ಪ್ರಸ್ತಾವನೆ :**

ಮೇಲೆ (4)ರಲ್ಲಿ ಓದಲಾದ ದಿನಾಂಕ : 13-04-2009ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರುರವರು ಮೇಲೆ (1)ರಲ್ಲಿ ಓದಲಾದ ದಿನಾಂಕ : 24-07-1989ರ ಸರ್ಕಾರದ ಅಧಿಸೂಚನೆ-IIಯ ಕ್ರ.ಸಂ.52ರ ಅನ್ವಯ ಶ್ರೀ ಎಫ್. ಆರ್. ಪಾಟೀಲ್, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಗುಲ್ಬರ್ಗ,ಇವರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ : 04-08-1989ರ ಅಪರಾಹ್ನ ಹುದ್ದೆಯ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಮೇಲೆ (2)ರಲ್ಲಿ ಓದಲಾದ ದಿನಾಂಕ : 20-11-1991ರ ಸರ್ಕಾರದ ಪತ್ರದನ್ವಯ ಸದರಿ ನಿವೃತ್ತ ಅಧಿಕಾರಿಯ ಜನ್ಮ ದಿನಾಂಕವನ್ನು 01-06-1951 ಎಂದು ಒಪ್ಪಲಾಗಿದೆ. ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಶ್ರೀ ಎಫ್.ಆರ್.ಪಾಟೀಲ್ ರವರು 38 ವರ್ಷ 2 ತಿಂಗಳು 03 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗುವುದರಿಂದ, ನಿಯಮಾನುಸಾರ 4 ವರ್ಷಗಳ ಹೆಚ್ಚುವರಿ ಸೇವಾ ಸೌಲಭ್ಯಕ್ಕೆ ಅವರು ಅರ್ಹರಿದ್ದು ಪರಿಗಣಿಸುವಂತೆ ಕೋರಿರುತ್ತಾರೆ. ಸದರಿಯವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1) ರನ್ವಯ ಅರ್ಹರಿರುವುದರಿಂದ ಈ ಬಗ್ಗೆ ಆದೇಶವನ್ನು ಹೊರಡಿಸುವಂತೆ ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 223 ಪಿಪಿಇ 2009, ಬೆಂಗಳೂರು, ದಿನಾಂಕ : 30-07-2011**

ಮೇಲಿನ ವಿವರಗಳ ಹಿನ್ನೆಲೆಯಲ್ಲಿ, ಶ್ರೀ ಎಫ್. ಆರ್. ಪಾಟೀಲ್, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ಗುಲ್ಬರ್ಗ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ರೀತ್ಯ ಗರಿಷ್ಠ ಮಿತಿಯಾದ 04 ವರ್ಷಗಳ ಅಧಿಕ ಸೇವಾವಧಿಯನ್ನು ಅವರ ಪಿಂಚಣಿ ಸೌಲಭ್ಯಗಳಿಗೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಅದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ : ಆಇ 598 ಸೇ-3/2011, ದಿನಾಂಕ : 01-07-2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1887 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಬಿ)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ದಿವಂಗತ ಐ.ಆರ್.ಬೆಡಸೂರ, ಹಿಂದಿನ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಗುಲ್ಬರ್ಗ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247 (ಎ)(1)ರ ಸೌಲಭ್ಯಕ್ಕೆ ಪರಿಗಣಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ- II ಸಂ : ಲಾ 161 ಪಿಪಿಇ 86, ದಿನಾಂಕ : 24-07-1989.
2. ಸರ್ಕಾರದ ಪತ್ರ ಸಂಖ್ಯೆ : ಲಾ 200 ಪಿಪಿಇ 91, ದಿನಾಂಕ : 05-12-1991.
3. ಶ್ರೀ ಐ.ಆರ್. ಬೆಡಸೂರ ಇವರ ಮನವಿಯ ದಿನಾಂಕ : 18-08-2008.

4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ : ಡಿಪಿಎನ್/ಲೆಕ್ಕ–1/206/2008–09, ದಿನಾಂಕ : 28–06–2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 24–07–1989ರ ಸರ್ಕಾರದ ಅಧಿಸೂಚನೆ–11ಯ ಕ್ರ.ಸಂ.67ರ ಅನ್ವಯ ದಿವಂಗತ ಐ.ಆರ್.ಬೆಡಸೂರ, ಹಿಂದಿನ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಗುಲ್ಬರ್ಗ,ಇವರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ : 05–08–1989ರ ಅಪರಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಮೇಲೆ (2)ರಲ್ಲಿ ಓದಲಾದ ದಿನಾಂಕ : 05–12–1991ರ ಸರ್ಕಾರದ ಪತ್ರದನ್ವಯ ಸದರಿ ಅಧಿಕಾರಿಯ ಜನ್ಮ ದಿನಾಂಕವನ್ನು 01–06–1954 ಎಂದು ಒಪ್ಪಲಾಗಿದೆ. ಮೇಲೆ (3)ರಲ್ಲಿ ಓದಲಾದ ದಿನಾಂಕ : 18–08–2008ರ ಮನವಿಯಲ್ಲಿ ದಿವಂಗತ ಐ.ಆರ್.ಬೆಡಸೂರ ರವರು ಅವರಿಗೆ 35 ವರ್ಷ 02 ತಿಂಗಳಾಗಿದ್ದಾಗ ಸರ್ಕಾರಿ ಸೇವೆಗೆ ಸೇರಿದ್ದು, ನಿಯಮಾನುಸಾರ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಹೆಚ್ಚುವರಿ ಸೇವಾ ಸೌಲಭ್ಯಕ್ಕೆ ಅವರು ಅರ್ಹರಿರುವುದರಿಂದ ಪರಿಗಣಿಸುವಂತೆ ಕೋರಿದ್ದು, ಮೇಲೆ (4)ರಲ್ಲಿ ಓದಲಾದ ದಿನಾಂಕ : 28–06–2011ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ರವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1) ರನ್ವಯ ಸದರಿಯವರು ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಹೆಚ್ಚುವರಿ ಸೇವಾ ಸೌಲಭ್ಯಕ್ಕೆ ಅರ್ಹರಿರುವುದರಿಂದ ಈ ಬಗ್ಗೆ ಆದೇಶವನ್ನು ಹೊರಡಿಸುವಂತೆ ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 277 ಪಿಪಿಇ 2011, ಬೆಂಗಳೂರು, ದಿನಾಂಕ : 30–07–2011**

ಮೇಲಿನ ವಿವರಗಳ ಹಿನ್ನೆಲೆಯಲ್ಲಿ, ದಿವಂಗತ ಐ.ಆರ್.ಬೆಡಸೂರ, ಹಿಂದಿನ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಗುಲ್ಬರ್ಗ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಅನ್ವಯ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಅಧಿಕ ಸೇವಾವಧಿಯನ್ನು ದಿವಂಗತರ ನಿವೃತ್ತಿ ವೇತನ ಸೌಲಭ್ಯಗಳಿಗೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂ : ಆಇ 805 ಸೇ–3/2011, ದಿನಾಂಕ : 21–07–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಕೆ. ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1888 ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ನಾಡಪ್ರಭು ಕೆಂಪೇಗೌಡ ಬಡಾವಣೆಗೆ ಸಂಪರ್ಕ ಕಲ್ಪಿಸಲು ಮೈಸೂರು ರಸ್ತೆ ಮತ್ತು ಮಾಗಡಿ ರಸ್ತೆ ನಡುವಿನ ರಸ್ತೆ ನಿರ್ಮಾಣದ ಬಗ್ಗೆ ಫೆರಿಫೆರಲ್ ರಿಂಗ್ ರಸ್ತೆ ಭಾಗ–2ರ ಯೋಜನೆಗೆ ಮಂಜೂರಾತಿ ನೀಡಿ ಆಡಳಿತಾತ್ಮಕ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರ ಪತ್ರ ಸಂಖ್ಯೆ : ಬೆಂಅಪ್ರಾ/ಅಭೂಸ್ವಾಅ/308/2010–11, ದಿನಾಂಕ : 14–02–2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ರವರು ಬೆಂಗಳೂರಿನ ಹೊರವಲಯದಲ್ಲಿ ಫೆರಿಫೆರಲ್ ರಿಂಗ್ ರಸ್ತೆಯನ್ನು ನಿರ್ಮಾಣ ಮಾಡುವ ಯೋಜನೆಯನ್ನು 2 ಭಾಗಗಳಾಗಿ ವಿಂಗಡಿಸಿ ಕೈಗೆತ್ತಿಕೊಂಡಿದ್ದು, ಹೊಸೂರು ರಸ್ತೆಯಿಂದ ಬನ್ನೇರುಘಟ್ಟ ರಸ್ತೆ, ಕನಕಪುರ ರಸ್ತೆ, ಮೈಸೂರು ರಸ್ತೆ ಮಾಗಡಿ ರಸ್ತೆ ಮಾರ್ಗವಾಗಿ ತುಮಕೂರು ರಸ್ತೆವರೆಗಿನ 51 ಕಿ.ಮೀ. ರಸ್ತೆಯನ್ನು ಫೆರಿಫೆರಲ್ ರಿಂಗ್ ರಸ್ತೆ ಭಾಗ–2 ಎಂದು ಗುರುತಿಸಲಾಗಿರುತ್ತದೆ. ಪಿ.ಆರ್.ಆರ್. ಭಾಗ–2ರ ಪೈಕಿ ನಾಡಪ್ರಭು ಕೆಂಪೇಗೌಡ ಬಡಾವಣೆಗೆ ಸಂಪರ್ಕ ಕಲ್ಪಿಸಲು ಮೈಸೂರು ರಸ್ತೆ ಮತ್ತು ಮಾಗಡಿ ರಸ್ತೆ ನಡುವಿನ ರಸ್ತೆ ನಿರ್ಮಾಣ ಮಾಡುವ ಬಗ್ಗೆ ಯೋಜನೆಯನ್ನು ಕೈಗೆತ್ತಿಕೊಳ್ಳುವುದು ತುಂಬಾ ಅವಶ್ಯವಿರುವುದರಿಂದ ರಿಂಗ್ ರೋಡ್ ಫೇಸ್–2ರ ಕಿ.ಮೀ. 97.97 ರಿಂದ 108.72 ಕಿ.ಮೀ. ರವರೆಗೆ (10.75 ಕಿ.ಮೀ.) ರಸ್ತೆ ನಿರ್ಮಾಣ ಮಾಡಲು ಪ್ರಾಧಿಕಾರವು ಸಂಖ್ಯೆ : BDA/Commr/DC(LA)/SALAO/115/2005-06, ದಿನಾಂಕ : 12–12–2005 ಹಾಗೂ 15–11–2006 ರಂದು ಪ್ರಾರಂಭಿಕ ಅಧಿಸೂಚನೆಯನ್ನು ಹೊರಡಿಸಲಾಗಿರುತ್ತದೆಯೆಂದು ವರದಿ ಮಾಡಿರುತ್ತದೆ.

ಮುಂದುವರೆದು, ಪ್ರಾಧಿಕಾರದ ಸಭೆ ದಿನಾಂಕ : 17–01–2011ರ ವಿಷಯ ಸಂಖ್ಯೆ : 26/11 ರಲ್ಲಿ ಚರ್ಚಿಸಿದಂತೆ ನಾಡಪ್ರಭು ಕೆಂಪೇಗೌಡ ಬಡಾವಣೆಗೆ ಸಂಪರ್ಕ ಕಲ್ಪಿಸಲು ಮೈಸೂರು ರಸ್ತೆ ಮತ್ತು ಮಾಗಡಿ ರಸ್ತೆ ನಡುವಿನ ರಸ್ತೆ ನಿರ್ಮಾಣದ ಬಗ್ಗೆ ಫೆರಿಫೆರಲ್ ವರ್ತುಲ ರಸ್ತೆ, ಭಾಗ–2 ರ ಯೋಜನೆಗೆ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕಂಬೀಪುರ ಚಳ್ಳಘಟ್ಟ, ಕೆ.ಕೃಷ್ಣಸಾಗರ, ಭೀಮನಕುಪ್ಪೆ, ಕೊಮ್ಮಘಟ್ಟ, ಸೂಲಿಕೆರೆ ಮತ್ತು

ಕೆಂಚನಪುರ ಹಾಗೂ ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ, ಕನ್ನಲ್ಲಿ, ಶೀಗೇಹಳ್ಳಿ, ಕೊಡಿಗೇಹಳ್ಳಿ ಮತ್ತು ದಾಸನಪುರ ಹೋಬಳಿ ಮಾಚೋಹಳ್ಳಿ ಗ್ರಾಮಗಳಲ್ಲಿನ ಒಟ್ಟು 344 ಎಕರೆ 03 ಗುಂಟೆ ಜಮೀನುಗಳಿಗೆ ಭೂಸ್ವಾಧೀನ ಪ್ರಕ್ರಿಯೆಯನ್ನು ಮುಂದುವರೆಸಲು ತೀರ್ಮಾನಿಸಿದ್ದು, ಈ ಪೈಕಿ ಚಳ್ಳಘಟ್ಟ ಗ್ರಾಮದ ಸರ್ವೆ ನಂ. 10 ಮತ್ತು 19/2ರ ಒಟ್ಟು ವಿಸ್ತೀರ್ಣ 22 ಎಕರೆ 33 ಗುಂಟೆ ಜಮೀನುಗಳು ಈಗಾಗಲೇ ನಾಡಪ್ರಭು ಕೆಂಪೇಗೌಡ ಬಡಾವಣೆಗೆ ಹೊರಡಿಸಲಾದ ಅಂತಿಮ ಅಧಿಸೂಚನೆ ಸಂಖ್ಯೆ : ಯುಡಿಡಿ 51 ಎಂಎನ್‌ಎಕ್ಸ್ 2010, ದಿನಾಂಕ : 18–02–2010 ರಲ್ಲಿ ಒಳಗೊಂಡಿರುವುದರಿಂದ ಇವುಗಳನ್ನು ಹೊರತುಪಡಿಸಿ ಉಳಿದ 321 ಎಕರೆ 10 ಗುಂಟೆ ಜಮೀನಿಗೆ ಅಂತಿಮ ಅಧಿಸೂಚನೆ ಹೊರಡಿಸುವುದು ಅವಶ್ಯವಿರುವುದರಿಂದ ಹಾಗೂ ಇದರ ಮೊತ್ತ ರೂ. 349.00 ಕೋಟಿಗಳಿಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಕಾಯ್ದೆ 1976 ಕಲಂ 18(3)ರ ಪ್ರಕಾರ ಸರ್ಕಾರದ ಆಡಳಿತಾತ್ಮಕ ಮಂಜೂರಾತಿ ನೀಡುವಂತೆ ಹಾಗೂ ಸದರಿ ಕಾಯ್ದೆ ಕಲಂ 19(1)ರ ಪ್ರಕಾರ ಅಂತಿಮ ಅಧಿಸೂಚನೆ ಹೊರಡಿಸುವಂತೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಆಯುಕ್ತರು ಕೋರಿರುತ್ತಾರೆ. ಸರ್ಕಾರವು ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 169 ಬೆಂಭೂಸ್ವಾ 2011, ಬೆಂಗಳೂರು, ದಿನಾಂಕ : 22–07–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶಗಳ ಹಿನ್ನೆಲೆಯಲ್ಲಿ, ನಾಡಪ್ರಭು ಕೆಂಪೇಗೌಡ ಬಡಾವಣೆಗೆ ಸಂಪರ್ಕ ಕಲ್ಪಿಸಲು ಮೈಸೂರು ರಸ್ತೆ ಮತ್ತು ಮಾಗಡಿ ರಸ್ತೆ ನಡುವಿನ ರಸ್ತೆ ನಿರ್ಮಾಣದ ಬಗ್ಗೆ ಫೆರಿಫೆರಲ್ ವರ್ತುಲ ರಸ್ತೆ, ಭಾಗ–2ರ ಯೋಜನೆಗೆ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕಂಬೀಪುರ ಚಳ್ಳಘಟ್ಟ, ಕೆ.ಕೃಷ್ಣಸಾಗರ, ಭೀಮನಕುಪ್ಪೆ, ಕೊಮ್ಮಘಟ್ಟ, ಸೂಲಿಕೆರೆ ಮತ್ತು ಕೆಂಚನಪುರ ಹಾಗೂ ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ, ಕನ್ನಲ್ಲಿ, ಶೀಗೇಹಳ್ಳಿ, ಕೊಡಿಗೆಹಳ್ಳಿ ಮತ್ತು ದಾಸನಪುರ ಹೋಬಳಿ ಮಾಚೋಹಳ್ಳಿ ಗ್ರಾಮಗಳಲ್ಲಿನ ಒಟ್ಟು 344 ಎಕರೆ 03 ಗುಂಟೆ ಜಮೀನುಗಳ ಪೈಕಿ ಚಳ್ಳಘಟ್ಟ ಗ್ರಾಮದ ಸರ್ವೆ ನಂ. 10 ಮತ್ತು 19/2ರ ಜಮೀನುಗಳ ಒಟ್ಟು ವಿಸ್ತೀರ್ಣ 22 ಎಕರೆ 33 ಗುಂಟೆ ಜಮೀನುಗಳನ್ನು ನಾಡಪ್ರಭು ಕೆಂಪೇಗೌಡ ಬಡಾವಣೆಗೆ ಹೊರಡಿಸಲಾದ ಅಂತಿಮ ಅಧಿಸೂಚನೆ ಸಂಖ್ಯೆ : ಯುಡಿಡಿ 51 ಎಂಎನ್‌ಎಕ್ಸ್ 2010, ದಿನಾಂಕ : 18–02–2010 ರಲ್ಲಿ ಒಳಗೊಂಡಿರುವುದನ್ನು ಹೊರತುಪಡಿಸಿ ಉಳಿದ 321 ಎಕರೆ 10 ಗುಂಟೆ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಕಾಯ್ದೆ 1976 ಕಲಂ 18(3)ರ ಪ್ರಕಾರ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಿದೆ.

ಸದರಿ ಕಾಮಗಾರಿಗೆ ತಗಲುವ ಅಂದಾಜು ರೂ. 349.00 ಕೋಟಿ (ಮೂರು ನೂರ ನಲವತ್ತೊಂಬತ್ತು ಕೋಟಿ) ವೆಚ್ಚವನ್ನು ಪ್ರಾಧಿಕಾರದ ಸಂಪನ್ಮೂಲಗಳಿಂದಲೇ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಪ್ರೇಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1889 ನಗರಾಭಿವೃದ್ಧಿ ಇಲಾಖೆ

## PERSONNEL AND ADMINISTRATIVE REFORMS SECRETARIAT

**Sub :** IFS cadre of Karnataka-Amendment to the list of IFS cadre posts kept in abeyance.

**Read :** G. O. No. DPAR/31/SFP/2010, dated : 28-4-2011.

**Preamble:**

As per the State Government order read above, sanction was accorded to keep 14 IFS cadre posts of Deputy Conservator of Forests in abeyance for a period of six months as per powers vested with the State Government under rule 10 of IFS (Cadre) Rules.

The State Government has decided to delete IFS cadre post of Deputy Conservator of Forests, Territorial, Koppal Division from the list of posts kept in abeyance in the G.O. dated : 28-4-2011 as per the powers vested with the State Government in terms of proviso to Rule 9(1) (a) of IFS (Cadre) rules. Accordingly, the following orders are issued.

**GOVERNMENT ORDER NO. DPAR 31 SFP 2011, BANGALORE, DATED 28-7-2011.**

The Government hereby orders that the IFS cadre post of Deputy Conservator of Forests, Territorial, Koppal Division appearing at Sl. No. 2 in the list of 14 IFS cadre posts kept in abeyance vide G.O. of even No. dated : 28-4-2011, be deleted from the list and thereby the cadre post of Deputy Conservator of Forests, Territorial, Koppal Division stands revived.

By Order and in the name of the Governor of Karnataka,

**A.P. ATRE**

P.R. No. 1890 Under Secretary to Government,

DPAR (Services-IV).

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು ಗಿಳಾಲಗುಂಡಿ ಕೊಳ್ಳಿಬಚ್ಚಲು ಹಳ್ಳಕ್ಕೆ ಹೊಸಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಪರಿಹಾರ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ : ಮುಸದ/ಲೆಶಾಖೆ/ಲೆಸ–1/3/ಭೂಸ್ವಾಧೀನ/11–12/1533 ದಿನಾಂಕ : 8–7–2011.

**ಪ್ರಸ್ತಾವನೆ :**

ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು ಗಿಳಾಲಗುಂಡಿ ಕೊಳ್ಳಿಬಚ್ಚಲುಹಳ್ಳಕ್ಕೆ ಹೊಸಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಶಿಕಾರಿಪುರ ತಾಲ್ಲೂಕು ಕುಂಸಿ ಹೋಬಳಿ, ಕುಣಿಹೊಸೂರು ಗ್ರಾಮದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚುವರಿ ಪರಿಹಾರ ಮೊತ್ತ ರೂ. 68,26,772–00 ಗಳನ್ನು ಬಿಡುಗಡೆ ಮಾಡಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ : 8–7–11ರ ಪತ್ರದಲ್ಲಿ ಕೋರಿದ್ದಾರೆ.

ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರ ಅಧಿಸೂಚನೆ ದಿನಾಂಕ : 30–6–2005 ರ ಪ್ರಕಾರ ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ದಿನಾಂಕ : 23–11–2008 ರಂದು ರಚಿಸಿದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಶಿವಮೊಗ್ಗ ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ) ದಲ್ಲಿ ದಾಖಲಿಸಿದ್ದ ಎಲ್.ಎ.ಸಿ. ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಪ್ರತಿ ಎಕರೆ ತರಿ ಜಮೀನಿಗೆ ರೂ. 1.00 ಲಕ್ಷ, ಖುಷ್ಕಿ ಜಮೀನಿಗೆ ಪ್ರತಿ ಎಕರೆಗೆ ರೂ. 5.00 ಲಕ್ಷ ಹಾಗೂ ಜಮೀನಿನಲ್ಲಿದ್ದ ಗಿಡಗಳಿಗೆ ರೂ. 10.00 ಲಕ್ಷಗಳನ್ನು ನಿಗದಿಪಡಿಸಿದೆ. ಅದರಂತೆ, ಪಾವತಿಸಬೇಕಾದ ಮೊತ್ತದ ವಿವರ ಕೆಳಕಂಡಂತಿದೆ :

| ಕ್ರ. ಸಂ. | ಎಲ್ಎಸಿ ಸಂಖ್ಯೆ | ಕುಣಿಹೊಸೂರು ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 11/09 | 43,44,46 | 7–35 | 68,26,772–00 |
| | | ಒಟ್ಟು | | 68,26,772–00 |

ಸಿವಿಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ : ಆರ್‌ಡಿ 807 ಎಲ್‌ಸಿಎ 2010, ದಿನಾಂಕ : 19–1–11 ರಂದು ಅಭಿಪ್ರಾಯ ನೀಡಿದೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 87 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ : 30ನೇ ಜುಲೈ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕು ಗಿಳಾಲಗುಂಡಿ ಕೊಳ್ಳಿಬಚ್ಚಲು ಹಳ್ಳಕ್ಕೆ ಹೊಸಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಶಿಕಾರಿಪುರ ತಾಲ್ಲೂಕು ಕುಂಸಿ ಹೋಬಳಿ, ಕುಣಿಹೊಸೂರು ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ ಪ್ರಕರಣದಲ್ಲಿ ನೀಡಿರುವ ಆದೇಶದಂತೆ ರೂ. 68,26,772–00 ಗಳನ್ನು (ಅರವತ್ತೆಂಟು ಲಕ್ಷದ ಇಪ್ಪತ್ತಾರು ಸಾವಿರದ ಏಳುನೂರ ಎಪ್ಪತ್ತೆರಡು ರೂ.ಗಳು ಮಾತ್ರ) ಗಳ ಪರಿಹಾರವನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ನೀಡಲು ಸರ್ಕಾರದ ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 68,26,772/– ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ : 20–10–2010 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್.ನಂ. 1891 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗದಗ್ ಜಿಲ್ಲೆ ಮತ್ತು ತಾಲ್ಲೂಕು ಸಿಂಗಟರಾಯನಕೇರಿ ಮತ್ತು ಪಾಪನಾಶಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಧನ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ : 30–6–11 ರ ಪತ್ರ ಸಂಖ್ಯೆ : ಮುಇಂ/ಸನೀ(ಉ)/ಭೂಸ್ವಾಪ್ರ/2011–12/3538.

**ಪ್ರಸ್ತಾವನೆ :**

ಗದಗ್ ಜಿಲ್ಲೆ, ಮತ್ತು ತಾಲ್ಲೂಕು ಸಿಂಗಟರಾಯನಕೇರಿ ಮತ್ತು ಪಾಪನಾಶಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸಿಂಗಟರಾಯನಕೇರಿ ಮತ್ತು ಪಾಪನಾಶಿ ಗ್ರಾಮದ ಜಮೀನುಗಳಿಗೆ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ದಿನಾಂಕ : 30–6–11ರ ಪತ್ರದಲ್ಲಿ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ :

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ : 11–10–2003

- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ : 13–6–2005

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಧನ ಪಡೆದ ಭೂಮಾಲೀಕರು ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1) ರಡಿ ಗದಗ್ ಸಿವಿಲ್ (ಹಿರಿಯ ವಿಭಾಗ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿದ್ದು, ನ್ಯಾಯಾಲಯವು ಪ್ರತಿ ಎಕರೆ ಖುಷ್ಕಿ ಜಮೀನಿಗೆ ರೂ. 48,000/– ಗಳು, ಅರೆ ನೀರಾವರಿ ಜಮೀನಿಗೆ ರೂ. 1,00,000/– ಗಳನ್ನು ನಿಗದಿಪಡಿಸಿ ಆದೇಶಿಸಿದೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ : ಆರ್‌ಡಿ 69 ಎಲ್‌ಸಿಬಿ 2009, ದಿನಾಂಕ : 6–4–10 ರಂದು ಅಭಿಪ್ರಾಯ ನೀಡಿದೆ.

ಪಾವತಿಸಬೇಕಾದ ಪರಿಹಾರದ ವಿವರ ಕೆಳಕಂಡಂತಿದೆ :

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಸ.ನಂ. | ಗ್ರಾಮ | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|---|
| 1 | 50/05 | 36/4 | ಪಾಪನಾಶಿ | 3–31 | 174491 |
| 2 | 51/05 | 36/2 | ಪಾಪನಾಶಿ | 4–00 | 184892 |
| 3 | 52/05 | 36/3 | ಪಾಪನಾಶಿ | 4–00 | 184892 |
| 4 | 53/05 | 36/1 | ಪಾಪನಾಶಿ | 4–00 | 308153 |
| 5 | 54/05 | 37ಎ/6ಎ | ಪಾಪನಾಶಿ | 0–30 | 34667 |
| 6 | 55/05 | 35ಬಿ/2ಬಿ | ಪಾಪನಾಶಿ | 0–32 | 36978 |
| 7 | 56/05 | 37/ಎ/5 | ಪಾಪನಾಶಿ | 0–04 | 4622 |
| 8 | 57/05 | 87/3ಬಿ | ಶಿಂಗಟರಾಯನಕೇರಿ | 0–07 | 14830 |
| | ಒಟ್ಟು | | | | 943525 |

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 77 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ : 30ನೇ ಜುಲೈ 2011.**

ಗದಗ್ ಜಿಲ್ಲೆ, ಮತ್ತು ತಾಲ್ಲೂಕು ಸಿಂಗಟರಾಯನಕೇರಿ ಮತ್ತು ಪಾಪನಾಶಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸಿಂಗಟರಾಯನಕೇರಿ ಮತ್ತು ಪಾಪನಾಶಿ ಗ್ರಾಮಕ್ಕೆ ಸೇರಿದ ವಿವಿಧ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ. 9,43,525–00ಗಳನ್ನು (ಒಂಭತ್ತು ಲಕ್ಷದ ನಲವತ್ಮೂರು ಸಾವಿರದ ಐನೂರ ಇಪ್ಪತ್ತೈದು ರೂ.ಗಳು ಮಾತ್ರ) ಪಾವತಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 9,43,525/– ಗಳನ್ನು ಹಂಚಿಕೆ ಮಾಡಿ, ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ : 20–10–2010 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್.ನಂ. 1892

## ENERGY SECRETARIAT

**Sub :** Extension of time limit to implement the wind power project in favour M/s RSR Power Pvt. Ltd.-reg.

**Read :** 1. Government Order No. EN 432 NCE 2010, dated : 16-12-2010.

2. Letter No. RSR/Shirgoan/12/2011 dated : 21-7-2011.

**Preamble:**

In the Government Order read at (1) above approval has been accorded for enhancement of wind power capacity from 7.00 MW to 30.60 MW at Shirgaon, Naghral and Girgaon of Belgaum District in favour of M/s RSR Power Private limited subject to condition that the company shall commission the project by 31-3-2011 and supply 25.00 MW power to State Grid.

In the letter read at (2) above the developer has stated that due to certain procedural delay, they are unable to Commission the project and they are confident to implement the project by December 2011 and requested to extend the time limit for implementing the project and permission to sign the Wheeling and Banking Agreement.

The proposal has been examined in detail and issued following Order :-

**GOVERNMENT ORDER NO. EN 318 NCE 2011, BANGALORE, DATED 26-7-2011.**

Government accords approval for the extension of time limit for implementing the wind power project in favour of M/s RSR Power Pvt. Ltd upto 31-12-2011.

By Order and in the name of the Governor of Karnataka,

**SURESH. B. KRISHNAPPANAVAR**

P.R. No. 1893

Under Secretary to Government,

Energy Department.

## ENERGY SECRETARIAT

**Sub :** Transfer of Commissioned 0.6 MW Wind Power Capacity in favour of M/s. Goutham Ladkat-reg.

**Read :**
1. KREDL OM No. KRED/08/BML/2003/929 dated 23-6-2003.
2. Death Certificate of in respect of Sri. Balasaheb M. Ladkat dated 30-1-2010 issued by Pune, Municipal Corporation.
3. KREDL Letter No. KRED/08/BML/2010/3366 dated 4/13-12-2010 and KRED/08/BML/2011/1906 dated 28-6-2011/1-7-2011.

**Preamble:**

In the O.M. read at (1) above, KREDL has permitted to transfer of wind power project of 0.6 MW capacity at Horakeredevarapura in Jogimatti wind Zone, Chitradurga District to Sri. Balasaheb M. Ladkat from the 81.6 MW capacity allotted to M/s Enercon (India) Ltd.

Due to the demise of Sri Balasaheb M. Ladkat as per the death certificate issued by Pune Municipal Corporation read at (2) above, KREDL has recommended for the transfer of 0.6 MW wind power capacity in favour of M/s. Goutham Ladkat vide letters read at (3) above.

The proposal has been examined in detail and hence the following order :-

**GOVERNMENT ORDER NO. EN 488 NCE 2010, BANGALORE, DATED 27-7-2011.**

Government is pleased to accord approval for change of ownership from Late Balasaheb M. Ladkat to his son M/s Goutham Ladkat Commissioned capacity of 0.6 MW Wind Power project at Horakeredevarapura in Jogimatti wind zone, Chitradurga District.

1. M/s Goutham Ladkat shall execute an agreement with Government within 45 (forty five) day from the date of issue of this Order.
2. M/s. Goutham Ladkat is permitted to have to PPA with the concerned ESCOM/KPTCL.
3. The Government reserves the right to Cancel/modify this Order.

The terms and conditions of the O.M. read at (1) above shall IPSO FACTO applicable.

By Order and in the name of the Governor of Karnataka,

**SURESH. B. KRISHNAPPANAVAR**

P.R. No. 1894

Under Secretary to Government,

Energy Department.

## ENERGY SECRETARIAT

**Sub :** Enhancement of wind power capacity from 77.4 MW to 216 MW in favour of M/s Sarjan Realities Limited-reg.

**Read :**
1. Government Order No. EN 60 NCE 2005, dated 22-3-2005.

| ಕ್ರ.ಸಂ. | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1. | ಶ್ರೀ ವೇಣುಗೋಪಾಲ್ ಬಿನ್ ಲೇ. ಗೋಪಾಲಪ್ಪ, ಪ್ರಶಾಂತನಗರ, ದೇವನಹಳ್ಳಿ | ಹಿಂ.ವ |
| 2. | ಶ್ರೀ ವೆಂಕಟೇಶ್ ಬಿನ್ ಕಾಳಪ್ಪ, ಗಂಗಮ್ಮನಗುಡಿ ಬೀದಿ, ಹಳೇ ಬಸ್ ನಿಲ್ದಾಣ, ದೇವನಹಳ್ಳಿ | ಪ.ಜಾ. |
| 3. | ಶ್ರೀಮತಿ ಮಂಜುಳ ಗುರುಸ್ವಾಮಿ ಕೋಂ ಎ.ಸಿ. ಗುರುಸ್ವಾಮಿ, ನಂ. 10, ಶಾಂತಿನಗರ, ದೇವನಹಳ್ಳಿ | ಮಹಿಳೆ |
| 4. | ಶ್ರೀ ಗಯಾಜ್ ಪಾಷಾ ಬಿನ್ ಅಬ್ದುಲ್ ಗಫಾರ್, ಟಿಪ್ಪು ಮಸೀದಿ ಹಿಂಭಾಗ, ಕೊರಮರ ಬೀದಿ, ತಾಲ್ಲೂಕು ಕಛೇರಿ ರಸ್ತೆ, ದೇವನಹಳ್ಳಿ | ಅ.ಸಂ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಾವಿತ್ರಿ**

ಪೀಠಾಧಿಕಾರಿ–2,

ವಸತಿ ಇಲಾಖೆ

ಪಿ.ಆರ್. 1909

## ವಸತಿ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ನಿಪ್ಪಾಣಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂ.: ವಇ/42/ಹೆಚ್ ಎಎಂ/1999, ದಿನಾಂಕ: 10–05–2000.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್‌ರಚಿಸಲು ತೀರ್ಮಾನಿಸಿದ್ದು, ಅದರಂತೆ ಬೆಳಗಾಂ ಜಿಲ್ಲೆ ನಿಪ್ಪಾಣಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂ. : ವಇ 28 ಹೆಚ್‌ಎಎಸ್ 2011 ಬೆಂಗಳೂರು, ದಿನಾಂಕ : 26 ನೇ ಜುಲೈ 2011**

ಬೆಳಗಾಂ ಜಿಲ್ಲೆ, ನಿಪ್ಪಾಣಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| ಕ್ರ.ಸಂ. | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1. | ಶ್ರೀಮತಿ ಸುಚಿತ್ರಾ ವೆಂಕಟೇಶ ಕುಲಕರ್ಣಿ, ನಿಪ್ಪಾಣಿ, ಚಿಕ್ಕೋಡಿ ತಾಲ್ಲೂಕು. | ಸಾಮಾನ್ಯ ಮಹಿಳೆ |
| 2. | ಶ್ರೀ ಅಸ್ಲಂ ಅಬ್ದುಲ್ ಹಮೀದ ಸಿಖಲಗಾರ, ನಿಪ್ಪಾಣಿ, ಚಿಕ್ಕೋಡಿ ತಾಲ್ಲೂಕು. | ಅ.ಸಂ. |
| 3. | ಶ್ರೀ ರೋಹನ ಅಶೋಕ ರಾವೊತ, ನಿಪ್ಪಾಣಿ, ಚಿಕ್ಕೋಡಿ ತಾಲ್ಲೂಕು. | ಹಿಂ.ವ |
| 4. | ಶ್ರೀ ಸುನೀಲ ಲಕ್ಷ್ಮಣ ಅಕ್ಕೊಳತೆ, ನಿಪ್ಪಾಣಿ, ಚಿಕ್ಕೋಡಿ ತಾಲ್ಲೂಕು. | ಎಸ್.ಸಿ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಾವಿತ್ರಿ**

ಪೀಠಾಧಿಕಾರಿ–2, ವಸತಿ ಇಲಾಖೆ

ಪಿ.ಆರ್. 1910

## ವಸತಿ ಸಚಿವಾಲಯ

**ವಿಷಯ :** ಯಾದಗಿರಿ ಜಿಲ್ಲೆ, ಯಾದಗಿರಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಎಂ/1999, ದಿನಾಂಕ: 10–05–2000.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್‌ರಚಿಸಲು ತೀರ್ಮಾನಿಸಿದ್ದು, ಅದರಂತೆ ಯಾದಗಿರಿ ಜಿಲ್ಲೆ, ಯಾದಗಿರಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 29 ಹೆಚ್‌ಎಎಸ್ 2011, ಬೆಂಗಳೂರು, ದಿನಾಂಕ : 26ನೇ ಜುಲೈ 2011**

ಯಾದಗಿರಿ ಜಿಲ್ಲೆ, ಯಾದಗಿರಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| ಕ್ರ.ಸಂ. | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ನಾಗಪ್ಪ ಗಚ್ಚಿನಮನಿ,<br>ಸಾ: ಯಾದಗಿರಿ | ಬಿ.ಸಿ.ಎಂ. |
| 2 | ಶ್ರೀಮತಿ ಪದ್ಮ ಕೋಂ ವೆಂಕಟೇಶ,<br>ಕೋಟಗರವಾಡ, ಯಾದಗಿರಿ | ಸಾಮಾನ್ಯ ಮಹಿಳೆ |
| 3 | ಶ್ರೀ ಅಂಬ್ರೇಶ ಬಿನ್ ತಿಪ್ಪಣ್ಣ,<br>ಸಾ: ಯಾದಗಿರಿ | ಎಸ್.ಸಿ. |
| 4 | ಶ್ರೀ ರಾಮವಿಲಾಸ ಭಟ್ಟ,<br>ಸಾ: ಯಾದಗಿರಿ | ಅ.ಸಂ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಾವಿತ್ರಿ**
ಪೀಠಾಧಿಕಾರಿ-2, ವಸತಿ ಇಲಾಖೆ

ಪಿ.ಆರ್. 1911

## ಒಳಾಡಳಿತ ಸಚಿವಾಲಯ

**ವಿಷಯ :** ಮುಖ್ಯಮಂತ್ರಿಗಳ ಪದಕ (ಪೊಲೀಸ್ ಸಿಬ್ಬಂದಿ) ನಿಯಮಗಳು 1982ಕ್ಕೆ ತಿದ್ದುಪಡಿ ಮಾಡುವ ಬಗ್ಗೆ.

**ಓದಲಾಗಿದೆ :** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಸಿಬಿ7/22/1999-2000 ದಿನಾಂಕ 22-05-2006, 27-02-2007, 29-06-2007, 22-01-2009 ಮತ್ತು 07-10-2010.

**ಪ್ರಸ್ತಾವನೆ :**

ಮೇಲೆ ಓದಲಾದ ಡಿಜಿ ಮತ್ತು ಐಜಿಪಿ ರವರ ಪತ್ರಗಳಲ್ಲಿ ಮುಖ್ಯಮಂತ್ರಿಗಳ ಪದಕ (ಪೊಲೀಸ್ ಸಿಬ್ಬಂದಿ) ನಿಯಮಗಳು, 1982ಕ್ಕೆ ತಿದ್ದುಪಡಿ ಮಾಡಲು ಈ ಕೆಳಗಿನಂತೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ

1) ನಿಯಮ-3 ರ ಪ್ರಕಾರ ಪ್ರಸ್ತುತ ಅಸಾಧಾರಣ ಸೇವೆ ಸಲ್ಲಿಸಿದ, ಸ್ತುತ್ಯಾರ್ಹವಾದ ಕಾರ್ಯನಿರ್ವಹಣೆಗೆ ಹಾಗೂ ಉತ್ತಮವಾಗಿ ಕರ್ತವ್ಯ ನಿರ್ವಹಿಸಿದ ಅಧಿಕಾರಿ/ಸಿಬ್ಬಂದಿಗಳಿಗೆ ಚಿನ್ನ, ಬೆಳ್ಳಿ ಹಾಗೂ ಕಂಚಿನ ಪದಕಗಳಿಗೆ ಬದಲಾಗಿ, ಮುಖ್ಯಮಂತ್ರಿಗಳ ಪದಕ "Chief Minister's Medal" ಎಂಬ ಹೆಸರಿನಲ್ಲಿ ಚಿನ್ನದ ಲೇಪನ ಹೊಂದಿದ ಪದಕಗಳನ್ನು ನೀಡಲು

2) ನಿಯಮ-3 ಉಪನಿಯಮ-8 ಹಾಗೂ ಸರ್ಕಾರದ ಆದೇಶ ಸಂಖ್ಯೆ: ಒಇ/188/ಪೊಸಇ/95 ದಿನಾಂಕ 26-10-1995ರ ಪ್ರಕಾರ ಮುಖ್ಯಮಂತ್ರಿಗಳ ಚಿನ್ನ, ಬೆಳ್ಳಿ ಹಾಗೂ ಕಂಚಿನ ಪದಕ ವಿಜೇತ ಅಧಿಕಾರಿ/ಸಿಬ್ಬಂದಿ ವರ್ಗದವರು ಕ್ರಮವಾಗಿ ರೂ.5000/-. ರೂ. 3000/- ಹಾಗೂ ರೂ. 2000/- ಗಳ ಪ್ರೋತ್ಸಾಹ ಧನಕ್ಕೆ ಬದಲಾಗಿ **"ಮುಖ್ಯಮಂತ್ರಿಗಳ ಪದಕ"** "Chief Minister's Medal" ವಿಜೇತರಿಗೆ ಪದಕದೊಂದಿಗೆ ರೂ. 5000/- ಗಳ ಪ್ರೋತ್ಸಾಹ ಧನವನ್ನು ನಿಗದಿಪಡಿಸಿ ನಿಯಮ-3 ಉಪನಿಯಮ-8ಕ್ಕೆ ತಿದ್ದುಪಡಿಯನ್ನು ತರಲು.

3) ಪ್ರಸ್ತುತ ಈಗಿರುವ ಪದಕಗಳ ಸಂಖ್ಯೆಯನ್ನು 50ಕ್ಕೆ ಬದಲಾಗಿ, 75ಕ್ಕೆ ಹೆಚ್ಚಿಸಲು ನಿಯಮ 5ಕ್ಕೆ ತಿದ್ದುಪಡಿಯನ್ನು ತರಲು

4) ನಿಯಮ-3ಕ್ಕೆ ತಿದ್ದುಪಡಿ ಪ್ರಸ್ತಾವನೆಯ ಹಿನ್ನೆಲೆಯಲ್ಲಿ ನಿಯಮ-12ಕ್ಕೆ ತಿದ್ದುಪಡಿಯನ್ನು ಮಾಡುವುದು ಸಮಂಜಸವಾಗಿರುತ್ತದೆ ಎಂದು

5) ಮುಖ್ಯಮಂತ್ರಿಗಳ ಪದಕವನ್ನು ಪೊಲೀಸ್ ಸಿಬ್ಬಂದಿಗಳಿಗೆ ಮರಣೋತ್ತರವಾಗಿ ನೀಡುವ ಬಗ್ಗೆ ಹೊಸದಾಗಿ ನಿಯಮವನ್ನು ಸೇರ್ಪಡೆ ಮಾಡಲು ಕೋರಲಾಗಿದೆ. ಸಾಹಸ ಕಾರ್ಯವನ್ನು (encounter) ಎದುರಿಸುವ ಸಂದರ್ಭಗಳಲ್ಲಿ ಮಾರಕಾಸ್ತ್ರಗಳ ದಾಳಿಯಿಂದ ಮರಣ ಹೊಂದುವ ಪೊಲೀಸ್ ಸಿಬ್ಬಂದಿಗಳಿಗೆ ಮುಖ್ಯಮಂತ್ರಿಗಳ ಪದಕವನ್ನು ಮರಣೋತ್ತರವಾಗಿ ದಯಪಾಲಿಸಲು ಅನುಮೋದನೆಯನ್ನು ನೀಡುವಂತೆಯೂ ಡಿಜಿ ಮತ್ತು ಐಜಿಪಿ ರವರ ಪತ್ರದಲ್ಲಿ ಕೋರಲಾಗಿರುತ್ತದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 213 ಪೊಸಇ 2006, ಬೆಂಗಳೂರು, ದಿನಾಂಕ : 21-07-2011**

ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪೊಲೀಸ್ ಸಿಬ್ಬಂದಿಗಳಿಗೆ ಪ್ರಧಾನ ಮಾಡುವ ಮುಖ್ಯಮಂತ್ರಿಗಳ ಪದಕ (ಪೊಲೀಸ್ ಸಿಬ್ಬಂದಿ) ನಿಯಮಗಳು, 1982ನ್ನು ಅನುಬಂಧದಲ್ಲಿರುವಂತೆ ತಿದ್ದುಪಡಿ ಮಾಡಿ ಪದಕಗಳೊಂದಿಗೆ ನೀಡಲಾಗುತ್ತಿರುವ ಪ್ರೋತ್ಸಾಹ ಬಹುಮಾನ ಧನವನ್ನು ಅನುಬಂಧದಲ್ಲಿ ನೀಡಿರುವಂತೆ ಹೆಚ್ಚಿಸಲು ಸರ್ಕಾರವು ಮಂಜೂರಾತಿಯನ್ನು ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 49 ವೆ-11/10 ದಿನಾಂಕ 08-03-2010 ರಲ್ಲಿ ನೀಡಲಾದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಅನುಬಂಧ**

| | ನಿಯಮ | ಪ್ರಸ್ತುತ ಜಾರಿಯಲ್ಲಿರುವ ನಿಯಮಗಳು | ತಿದ್ದುಪಡಿ |
|---|---|---|---|
| 1 | 3 | ಚಿನ್ನ, ಬೆಳ್ಳಿ, ಕಂಚಿನ ಪದಕಗಳು | ಚಿನ್ನದ ಲೇಪನ ಹೊಂದಿದ ಪದಕ |
| 2 | 3(viii) | ಚಿನ್ನದ ಪದಕಕ್ಕೆ ಪ್ರೋತ್ಸಾಹ ಧನ ರೂ. 5000–00 | ಚಿನ್ನದ ಲೇಪನ ಪದಕದೊಂದಿಗೆ ರೂ. 5000–00 ಗಳ ಪ್ರೋತ್ಸಾಹ ಧನ |
| | (ix) | ಬೆಳ್ಳಿಯ ಪದಕಕ್ಕೆ ಪ್ರೋತ್ಸಾಹ ಧನ ರೂ. 3000–00 | |
| | (x) | ಕಂಚಿನ ಪದಕಕ್ಕೆ ಪ್ರೋತ್ಸಾಹ ಧನ ರೂ. 2000–00 | |
| 3 | 5 | ನೀಡುವ ಸಂಖ್ಯೆ ವಾರ್ಷಿಕವಾಗಿ 50ಕ್ಕೆ ಮೀರದಂತೆ | 75ಕ್ಕೆ ಮೀರದಂತೆ |
| 4 | 12(ಎ) | ಮುಖ್ಯಮಂತ್ರಿಗಳ ಚಿನ್ನದ ಪದಕ | ಮುಖ್ಯಮಂತ್ರಿಗಳ ಚಿನ್ನದ ಪದಕ |
| | (ಬಿ) | ಮುಖ್ಯಮಂತ್ರಿಗಳ ಬೆಳ್ಳಿಯ ಪದಕ | |
| | (ಸಿ) | ಮುಖ್ಯಮಂತ್ರಿಗಳ ಬೆಳ್ಳಿಯ ಪದಕ | |
| 5 | ಹೊಸ ನಿಯಮ | ಮುಖ್ಯಮಂತ್ರಿಗಳ ಪದಕವನ್ನು ಮರಣೋತ್ತರವಾಗಿ ನೀಡಬಹುದಾಗಿದೆ. | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 1912

## ಕೃಷಿ ಸಚಿವಾಲಯ

**ವಿಷಯ :** ಹಾವೇರಿ ಜಿಲ್ಲೆ ರಾಣಿಬೆನ್ನೂರು ತಾಲ್ಲೂಕು, ಹನುಮನಮಟ್ಟಿಯಲ್ಲಿನ ಕೃಷಿ ಸಂಶೋಧನಾ ಕೇಂದ್ರದಲ್ಲಿ ಕೃಷಿ ಮಹಾವಿದ್ಯಾಲಯವನ್ನು ಸ್ಥಾಪಿಸುವ ಮತ್ತು ಬಿ.ಎಸ್ಸಿ (ಕೃಷಿ) ಸ್ನಾತಕ ಪದವಿ ಕಾರ್ಯಕ್ರಮವನ್ನು ಪ್ರಾರಂಭಿಸುವ ಬಗ್ಗೆ.

**ಓದಲಾಗಿದೆ :** ಧಾರವಾಡ ಕೃಷಿ ವಿಶ್ವವಿದ್ಯಾಲಯದ ದಿನಾಂಕ: 10–05–2011, 27–06–2011 ಮತ್ತು 01–07–2011ರ ಪತ್ರಗಳ ಸಂಖ್ಯೆ: ಕುಸ/ಕೃಮವಿ (ಹಾವೇರಿ)/2011–12.

**ಪ್ರಸ್ತಾವನೆ :**

ರಾಜ್ಯದ ಅನೇಕ ಜಿಲ್ಲೆಗಳಲ್ಲಿ ಕೃಷಿ ಮಹಾವಿದ್ಯಾಲಯಗಳನ್ನು ಸ್ಥಾಪಿಸಲು ಬೇಡಿಕೆ ಇರುತ್ತದೆ. ಕೃಷಿ ವಿಶ್ವವಿದ್ಯಾಲಯಗಳು ಮತ್ತು ಕೃಷಿ ಕಾಲೇಜುಗಳನ್ನು ಸ್ಥಾಪಿಸುವ ವಿಷಯವು ಸೇರಿದಂತೆ ಕೃಷಿ ಶಿಕ್ಷಣದ ಅಭಿವೃದ್ಧಿ ಮತ್ತು ಸಂಭಾವ್ಯತೆಯ ಬಗ್ಗೆ ಅಧ್ಯಯನ ಮಾಡಿ ವರದಿ ಸಲ್ಲಿಸುವ ಸಲುವಾಗಿ ಮಾಜಿ ಕುಲಪತಿಯವರಾದ ಡಾ: ಎಸ್. ಬಿಸಲಯ್ಯರವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಲಾಗಿತ್ತು. ಮುಂಬರುವ ವರ್ಷಗಳಲ್ಲಿ ರಾಜ್ಯದಲ್ಲಿ ನೂತನ ಕೃಷಿ ತಾಂತ್ರಿಕತೆ, ಆಹಾರ ಸುರಕ್ಷಿತೆ ಮತ್ತು ಉತ್ತಮ ಒಕ್ಕಲುತನ ಹವ್ಯಾಸಗಳನ್ನು ಅಗತ್ಯವಾಗುವ ಕುಶಲತೆಗೆ ಅನುಗುಣವಾಗಿಸುವ ದೃಷ್ಠಿಯಿಂದ ಸದರಿ ಸಮಿತಿಯು ಹಾವೇರಿ ಜಿಲ್ಲೆಯಲ್ಲಿ ಒಂದು ಕೃಷಿ ಕಾಲೇಜನ್ನು ಸ್ಥಾಪಿಸಲು ಶಿಫಾರಸ್ಸು ಮಾಡಿರುತ್ತದೆ.

ಹಾವೇರಿ ಜಿಲ್ಲೆಯಲ್ಲಿ 7 ತಾಲ್ಲೂಕುಗಳಿದ್ದು ಅನೇಕ ಕೃಷಿ ಮತ್ತು ಕೃಷಿ ಆಧಾರಿತ ಕಸುಬುಗಳು ಇಲ್ಲಿನ ಬಹುತೇಕ ಕುಟುಂಬಗಳಿಗೆ ಜೀವನೋಪಾಯವಾಗಿದ್ದು ವಿಭಿನ್ನ ರೀತಿಯ ಮಣ್ಣಿನ ರಚನೆಯುಳ್ಳ ಈ ಜಿಲ್ಲೆಯಲ್ಲಿ ಕೃಷಿ, ತೋಟಗಾರಿಕೆ ಮತ್ತು ಪ್ಲಾಂಟೇಷನ್ ಬೆಳೆಗಳನ್ನು ಬೆಳೆಯಲು ವಿಫುಲ ಅವಕಾಶಗಳಿವೆ. ಧಾರವಾಡ ಕೃಷಿ ವಿಶ್ವವಿದ್ಯಾಲಯದ ಆಡಳಿತ ವ್ಯಾಪ್ತಿಗೆ ಒಳಪಟ್ಟಿರುವ ಹನುಮಟ್ಟಿ ಕೃಷಿ ಸಂಶೋಧನಾ ಕೇಂದ್ರದ ವ್ಯಾಪ್ತಿಯಲ್ಲಿ 250 ಎಕರೆ ಜಮೀನಿದ್ದು ಉತ್ತಮ ಶಿಕ್ಷಣ, ಸಂಶೋಧನೆ ಮತ್ತು ವಿಸ್ತರಣಾ ಕಾರ್ಯಕ್ರಮಗಳನ್ನು ನಿರ್ವಹಿಸಲು ಉತ್ತಮ ಸಾಧನ ಸಾಮಗ್ರಿಗಳು ಇರುವುದರಿಂದ ಇಲ್ಲಿ ಕೃಷಿ ಮಹಾವಿದ್ಯಾಲಯವನ್ನು ಸ್ಥಾಪಿಸಿದಲ್ಲಿ ಜಿಲ್ಲೆಯ ಮತ್ತು ಅಕ್ಕಪಕ್ಕದ ಜಿಲ್ಲೆಯವರಿಗೆ ಅನುಕೂಲವಾಗುತ್ತದೆ ಎಂಬ ವರದಿ–ಮಾಹಿತಿಯನ್ನು ಮೇಲೆ ಓದಲಾದ ಪತ್ರಗಳಲ್ಲಿ ಧಾರವಾಡ ಕೃಷಿ ವಿಶ್ವವಿದ್ಯಾಲಯವು ಸಲ್ಲಿಸಿರುತ್ತದೆ. ಮುಂದುವರೆದು ಪ್ರಸ್ತುತ ಕೃಷಿ ಸಂಶೋಧನಾ ಕೇಂದ್ರದಲ್ಲಿ ಲಭ್ಯವಿರುವ ಬೋಧಕ ಮತ್ತು ಬೋಧಕೇತರ ವೃಂದದ ಸಿಬ್ಬಂದಿಗಳನ್ನು ಹೆಚ್ಚಿಸಬೇಕಾದ ಹಾಗೂ ಮೂಲ ಸೌಲಭ್ಯಗಳನ್ನು ಒದಗಿಸಲು ಕೈಗೊಳ್ಳಬೇಕಾದ ಕ್ರಮಗಳು ಮತ್ತು ಬೇಕಾದ ಅನುದಾನದ ಬಗ್ಗೆ ಪ್ರಸ್ತಾವನೆಯನ್ನೂ ಸಹ ಸಲ್ಲಿಸಿ ಸರ್ಕಾರದ ಮಂಜೂರಾತಿ ಹಾಗೂ ಅನುಮೋದನೆಯನ್ನು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ : ಕೃತೋಇ 140 ಕೃವಿವಿ 2011 ಬೆಂಗಳೂರು, ದಿನಾಂಕ : 22ನೇ ಜುಲೈ 2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಮೇರೆಗೆ ಹಾವೇರಿ ಜಿಲ್ಲೆ ರಾಣಿಬೆನ್ನೂರು ತಾಲ್ಲೂಕು ಹನುಮನಮಟ್ಟಿಯಲ್ಲಿನ ಕೃಷಿ ವಿಜ್ಞಾನ ಕೇಂದ್ರದಲ್ಲಿ 2011–12ನೇ ಸಾಲಿನಿಂದ ಕೃಷಿ ಮಹಾವಿದ್ಯಾಲಯವನ್ನು ಸ್ಥಾಪಿಸಲು ಮತ್ತು ಬಿ.ಎಸ್ಸಿ (ಕೃಷಿ) ಸ್ನಾತಕ ಪದವಿ ಕಾರ್ಯಕ್ರಮವನ್ನು ಪ್ರಾರಂಭಿಸಲು ಅಗತ್ಯವಾದ ಕ್ರಮಗಳನ್ನು ತೆಗೆದುಕೊಳ್ಳಲು ಸರ್ಕಾರದ ತಾತ್ವಿಕ ಮಂಜೂರಾತಿಯನ್ನು ಈ ಮೂಲಕ ನೀಡಲಾಗಿದೆ ಮತ್ತು ಈ ಉದ್ದೇಶಕ್ಕಾಗಿ ಪ್ರಸ್ತುತ ಸಾಲಿನಲ್ಲಿ 5.00 ಕೋಟಿ ರೂಪಾಯಿಗಳನ್ನು ಒದಗಿಸಲು ನಿರ್ಧರಿಸಿದ್ದು ಅಗತ್ಯವಾದ ಅನುದಾನವನ್ನು ಪ್ರತ್ಯೇಕ ಲೆಕ್ಕಶೀರ್ಷಿಕೆಯಡಿಯಲ್ಲಿ ಬಿಡುಗಡೆ ಮಾಡಲಾಗುವುದು.

2. ಅನುಬಂಧ–1ರಲ್ಲಿ ವಿವರಿಸಿರುವ (1) ಮೂಲ ಸೌಲಭ್ಯಗಳು (2) ಕಟ್ಟಡ ದುರಸ್ತಿ ಅಥವಾ ನಿರ್ಮಾಣ, (3) ಪೀಠೋಪಕರಣಗಳು, (4) ಸಿಬ್ಬಂದಿ ವೇತನ ಸೇರಿದಂತೆ ಇತರ ಸಾದಿಲ್ವಾರು ವೆಚ್ಚಗಳ ಬಾಬ್ತು ಒಟ್ಟು 25.00 ಕೋಟಿ ರೂಪಾಯಿಗಳ ಪ್ರಸ್ತಾವನೆಗೆ ತಾತ್ವಿಕ ಅನುಮೋದನೆಯನ್ನು ನೀಡುತ್ತಾ ಕಟ್ಟಡಗಳ ಅಂದಾಜು ವೆಚ್ಚವನ್ನು 5.00 ಕೋಟಿ ರೂಪಾಯಿಗಳಿಗೆ ಸೀಮಿತಗೊಳಿಸುವಂತೆ ನಿರ್ದೇಶಿಸಲಾಗಿದೆ.

3. ಕೃಷಿ ಮಹಾವಿದ್ಯಾಲಯವನ್ನು ಪ್ರಾರಂಭಿಸಲು ಅನುಬಂಧ–2ರಲ್ಲಿ ವಿವರಿಸಿದ 21 ಬೋಧಕರ ಮತ್ತು 35 ಬೋಧಕೇತರರ ಹುದ್ದೆಗಳ ಪೈಕಿ ಈ ಕೆಳಕಂಡ ಹುದ್ದೆಗಳನ್ನು ಹೊರತುಪಡಿಸಿ ಉಳಿದ ಹುದ್ದೆಗಳನ್ನು ಸೃಜಿಸಲು ಅನುಮೋದನೆ ನೀಡುತ್ತಾ ಬೋಧಕೇತರ ವೃಂದದ ಬೆರಳಚ್ಚುಗಾರರ, ಕಾವಲುಗಾರರು, ಅಟೆಂಡರ್, ಗಾರ್ಡನರ್, ರಕ್ಷಕ ಸಿಬ್ಬಂದಿ ಮತ್ತು ವಾಹನ ಚಾಲಕರ ವೃಂದದ ಹುದ್ದೆಗಳನ್ನು ಹಾಗೂ ಬೋಧಕೇತರ ವೃಂದದ ಇತರ ಹುದ್ದೆಗಳನ್ನು ಸೃಜಿಸದೇ ಸಾಧ್ಯವಾದಷ್ಟು ಹುದ್ದೆಗಳನ್ನು ಹೊರಗುತ್ತಿಗೆ ಆಧಾರದಲ್ಲಿ ಪಡೆದುಕೊಳ್ಳುವಂತೆ ಸೂಚಿಸಲಾಗಿದೆ.

4. ಮೇಲ್ಕಂಡ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ: 08–07–2011ರ ಟಿಪ್ಪಣಿ ಸಂಖ್ಯೆ: FD 315 Exp-5 2011 ರಲ್ಲಿ ಮತ್ತು ಯೋಜನಾ ಇಲಾಖೆಯ ದಿನಾಂಕ: 08–07–2011ರ ಟಿಪ್ಪಣಿ ಸಂಖ್ಯೆ: PD 51 PFO 2011ರಲ್ಲಿ ನೀಡಿರುವ ಸಹಮತಿ ಮತ್ತು ಷರತ್ತುಗಳಿಗೆ ಒಳಪಟ್ಟು ಹಾವೇರಿ ಜಿಲ್ಲೆಯಲ್ಲಿ ಕೃಷಿ ಕಾಲೇಜನ್ನು ಸ್ಥಾಪಿಸಲು ಧಾರವಾಡ ಕೃಷಿ ವಿಶ್ವವಿದ್ಯಾಲಯಕ್ಕೆ ಆಡಳಿತಾತ್ಮಕ ಮಂಜೂರಾತಿಯನ್ನು ಈ ಮೂಲಕ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಮಂಜುನಾಥ ಪಾಟೀಲ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ (ಕೃಷಿ ಸೇವೆಗಳು)

ಸಂಖ್ಯೆ: ಕೃತೋಇ 140 ಕೃವಿವಿ 2011

**ಅನುಬಂಧ – 1**

**ವಿಷಯ :** ಹಾವೇರಿ ಜಿಲ್ಲೆಯ ರಾಣಿಬೆನ್ನೂರು ತಾಲ್ಲೂಕು ಹನುಮಟ್ಟಿಯಲ್ಲಿ ಕೃಷಿ ಮಹಾವಿದ್ಯಾಲಯವನ್ನು (ಬಿ.ಎಸ್ಸಿ–ಕೃಷಿ ಪದವಿ ಕಾರ್ಯಕ್ರಮ) ಪ್ರಾರಂಭಿಸಲು ಅಗತ್ಯವಾದ ಮೂಲಭೂತ ಸೌಕರ್ಯ/ಅಭಿವೃದ್ಧಿ ಮತ್ತು ಸಾಧನ ಸಾಮಗ್ರಿಗಳ ವಿವರ

**ಮೂಲಭೂತ ಸೌಕರ್ಯ/ಅಭಿವೃದ್ಧಿ**

| ಕ್ರ. ಸಂ. | ವಿವರ | ಅಂದಾಜು ಮೊತ್ತ |
|---|---|---|
| 1 | ಕಾಲೇಜು ಕಟ್ಟಡ | 15.00 ಕೋಟಿ ರೂಪಾಯಿಗಳು |
| 2 | ವಿದ್ಯಾರ್ಥಿನಿಲಯ – ವಿದ್ಯಾರ್ಥಿಗಳಿಗೆ | |
| 3 | ವಿದ್ಯಾರ್ಥಿನಿಲಯ – ವಿದ್ಯಾರ್ಥಿನಿಯರುಗಳಿಗೆ | |
| 4 | ಸಿಬ್ಬಂದಿ ವಸತಿಗೃಹಗಳು | |
| 5 | ಇಲಾಖಾ ಪ್ರಯೋಗಾಲಯಗಳು | |
| 6 | ಆಹಾರ ಪ್ರಯೋಗಾಲಯಗಳು | |
| 7 | ಸ್ಟೋರ್ ರೂಮ್ | |
| 8 | ಚಿಕಿತ್ಸಾಲಯ | |
| 9 | ಗ್ರಂಥಾಲಯ | |
| 10 | ಆಟದ ಮೈದಾನ | |
| 11 | ಆಹಾರ ಸಂಸ್ಕರಣಾ ಘಟಕ | |
| 12 | ಶೀತಲೀಕರಣ ಘಟಕ | |
| 13 | ಗ್ರೀನ್ ಹೌಸ್ | |
| 14 | ಪಾಲಿ ಹೌಸ್ | |
| 15 | ವಾಹನಗಳ ಗ್ಯಾರೇಜು | |

**ಸಾಧನ ಸಾಮಗ್ರಿಗಳು**

ಅವಶ್ಯಕತೆಯಂತೆ – ಅಂದಾಜು 5.00 ಕೋಟಿ ರೂಪಾಯಿಗಳು

**ಸಿಬ್ಬಂದಿ ವೇತನ**

ವೃಂದಬಲದಂತೆ – ಅಂದಾಜು 5.00 ಕೋಟಿ ರೂಪಾಯಿಗಳು

**ಮಂಜುನಾಥ ಪಾಟೀಲ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ (ಕೃಷಿ ಸೇವೆಗಳು)

ಸಂಖ್ಯೆ: ಕೃತೋಇ 140 ಕೃವಿವಿ 2011

**ಅನುಬಂಧ – 2**

**ವಿಷಯ :** ಹಾವೇರಿ ಜಿಲ್ಲೆಯ ರಾಣೆಬೆನ್ನೂರು ತಾಲ್ಲೂಕು ಹನುಮಟ್ಟಿಯಲ್ಲಿ ಕೃಷಿ ಮಹಾವಿದ್ಯಾಲಯವನ್ನು (ಬಿ.ಎಸ್ಸಿ–ಕೃಷಿ ಪದವಿ ಕಾರ್ಯಕ್ರಮ) ಪ್ರಾರಂಭಿಸಲು ಅಗತ್ಯವಾದ ಬೋಧಕ ಮತ್ತು ಬೋಧಕೇತರ ವೃಂದದ ಹುದ್ದೆಗಳನ್ನು ಸೃಜಿಸುವ/ನಿಯೋಜಿಸುವ ವಿವರ

**ಬೋಧಕ ವೃಂದದ ಹುದ್ದೆಗಳು**

| ಕ್ರ. ಸಂ. | ವೃಂದ ಹುದ್ದೆ | ಹುದ್ದೆಗಳ ಸಂಖ್ಯೆ |
|---|---|---|
| 1 | ಡೀನ್ | 1 |
| 2 | ಪ್ರಾಧ್ಯಾಪಕರು | 5 |
| 3 | ಸಹ ಪ್ರಾಧ್ಯಾಪಕರು | 5 |
| 4 | ಸಹಾಯಕ ಪ್ರಾಧ್ಯಾಪಕರು | 10 |
| | ಒಟ್ಟು | 21 |

**ಭೋಧಕೇತರ ವೃಂದದ ಹುದ್ದೆಗಳು**

| ಕ್ರ. ಸಂ. | ವೃಂದ ಹುದ್ದೆ | ಹುದ್ದೆಗಳ ಸಂಖ್ಯೆ |
|---|---|---|
| 1 | ವೈದ್ಯಾಧಿಕಾರಿ | 1 |
| 2 | ಲೆಕ್ಕ ಅಧೀಕ್ಷಕರು | 2 |
| 3 | ಸಹಾಯಕ ಗ್ರಂಥಪಾಲಕ | 1 |
| 4 | ಲ್ಯಾಬ್/ಫೀಲ್ಡ್ ಅಸಿಸ್ಟೆಂಟ್ | 5 |
| 5 | ಹಿರಿಯ ಸಹಾಯಕರು | 2 |
| 6 | ಸಹಾಯಕರು | 2 |
| 7 | ಬೆರಳಚ್ಚುಗಾರರು | 4 |
| 8 | ಫಾರ್ಮಸಿಸ್ಟ್ | 1 |
| 9 | ವಾಚ್‌ಮನ್ | 5 |
| 10 | ಅಟೆಂಡರ್ | 4 |
| 11 | ಗಾರ್ಡನರ್ | 2 |
| 12 | ಸ್ಟೋರ್ ಕೀಪರ್ | 1 |
| 13 | ಅಸಿಸ್ಟೆಂಟ್ ಇಂಜಿನಿಯರ್ | 2 |
| 14 | ಅಸಿಸ್ಟೆಂಟ್ ಸೆಕ್ಯೂರಿಟಿ ಆಫೀಸರ್ | 1 |
| 15 | ವಾಹನ ಚಾಲಕರು | 2 |
| | **ಒಟ್ಟು** | **35** |

**ಮಂಜುನಾಥ ಪಾಟೀಲ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ (ಕೃಷಿ ಸೇವೆಗಳು)

ಪಿ.ಆರ್. 1913

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರಿ ಪಿ.ವೈ. ರಾಜೇಂದ್ರ ಕುಮಾರ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಇವರ ವಿರುದ್ಧದ ಇಲಾಖಾ ವಿಚಾರಣೆಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ :**
1. ನೋಟೀಸ್ ಸಂಖ್ಯೆ: ಸಿಆಸುಇ 06 ಇಮುವಿ 2008, ದಿನಾಂಕ 31–03–2008
2. ಶ್ರಿ ಪಿ.ವೈ. ರಾಜೇಂದ್ರ ಕುಮಾರ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಇವರು ಸಲ್ಲಿಸಿರುವ ದಿನಾಂಕ 26–08–2008ರ ಪ್ರತಿ ರಕ್ಷಣಾ ಹೇಳಿಕೆ.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 06 ಇಮುವಿ 2008, ದಿನಾಂಕ 17–01–2009.
4. ಶ್ರೀ ಎನ್. ಸುಬ್ಬರಾವ್, ವಿಚಾರಣಾಧಿಕಾರಿ, ಇವರ ಅಂತಿಮ ವರದಿ ದಿನಾಂಕ 15–10–2009.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 06 ಇಮುವಿ 2008, ದಿನಾಂಕ 15–05–2010.
6. ಶ್ರೀ ಪಿ.ವೈ. ರಾಜೇಂದ್ರಕುಮಾರ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಇವರ ಮನವಿ ದಿನಾಂಕ 27–05–2010.

**ಪ್ರಸ್ತಾವನೆ :**

ಶ್ರಿ ಪಿ.ವೈ. ರಾಜೇಂದ್ರ ಕುಮಾರ್, ನಿವೃತ್ತ ನಿರ್ದೇಶಕರು, ಇವರು ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಇಲ್ಲಿ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರು ತಮ್ಮ ಅಧಿಕಾರದ ಅವಧಿಯಲ್ಲಿ ಗಣಕ ಯಂತ್ರಗಳ ಖರೀದಿಯಲ್ಲಿ ನಿಯಮಗಳನ್ನು ಉಲ್ಲಂಘಿಸಿ ಕರ್ತವ್ಯ ಲೋಪ ಹಾಗೂ ಹಣ ದುರುಪಯೋಗದ ಬಗ್ಗೆ ಪ್ರಮುಖ ಆರೋಪಗಳಾದ ಗಣಕಯಂತ್ರಗಳನ್ನು ಖರೀದಿಸದೇ ಬೇರೆ ಗಣಕ ಯಂತ್ರಗಳನ್ನು ಖರೀದಿಸಿರುವ ಆರೋಪ; ಗಣಕ ಯಂತ್ರಗಳನ್ನು ಕೆ.ಜಿ.ಸಿ.ಸಿ. ಇವರಿಂದ ಪರಿಶೀಲನೆ ಮಾಡದಿರುವ ಆರೋಪ; ಗಣಕೀಕರಣದ ಟೆಂಡರ್ ವಿಷಯದಲ್ಲಿ ನಿಯಮಗಳನ್ನು ಪಾಲಿಸದೇ ಉಲಂಘಿಸಿರುವ ಇರುವ ಆರೋಪ ಗಣಕೀಕರಣಗೊಂಡ ಮಾಹಿತಿಯನ್ನು ಸಂಗ್ರಹವಾಗಿರುವ ಬಗ್ಗೆ ದೃಢಪಡಿಸಿಕೊಳ್ಳದಿರುವುದರಿಂದ ಸರ್ಕಾರದ ಅನುದಾನ ನಿಗದಿತ ಕಾರ್ಯಕ್ಕೆ ಬಳಕೆಯಾಗದಿರುವ ಆರೋಪ; ಗಣಕೀಕರಣಗೊಳಿಸಲು ಕರೆಯಲಾದ ಟೆಂಡರ್‌ನಲ್ಲಿ ಅಂದಾಜು ಮೊತ್ತ ಪ್ರತಿಬಿಂಬಿಸದೇ ಇರುವುದರಿಂದ ಸರಬರಾಜುದಾರರಿಗೆ ಸ್ಪಷ್ಟ ಮಾಹಿತಿ ದೊರೆಯದೇ ಇರುವ ಆರೋಪ; ಗ್ರಂಥಾಲಯದಲ್ಲಿ ಗಣಕ ಯಂತ್ರಗಳ ಅಳವಡಿಕೆ ಬಗ್ಗೆ ಸಾರ್ವಜನಿಕರಿಗೆ ಮಾಹಿತಿ ನೀಡದಿರುವ ಆರೋಪ; ಗಣಕ ಯಂತ್ರಗಳ ಬಗ್ಗೆ ನಿಖರವಾದ ಯಾಂತ್ರಿಕ ಕೌಶಲ್ಯವಿರುವ ಅಧಿಕಾರಿ/ನೌಕರರನ್ನು ನಿಯುಕ್ತಿಗೊಳಿಸಿ ಅದರ ಬಳಕೆ ಹಾಗು ಮಾಹಿತಿ ಸಾರ್ವಜನಿಕರಿಗೆ ಲಭ್ಯವಾಗಿಲ್ಲದಿರುವ ಆರೋಪಗಳಿಗಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ: 31–03–2008 ರಂದು ಅವರ ವಿವರಣೆ ಕೋರಿ ನೋಟೀಸ್ ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ಮೇಲೆ (2) ರಲ್ಲಿ ಓದಲಾದ ದಿನಾಂಕ; 26–08–2008ರ ಉತ್ತರದಲ್ಲಿ ಆರೋಪಿತ ಅಧಿಕಾರಿಯವರಾದ ಶ್ರೀ ಪಿ.ವೈ. ರಾಜೇಂದ್ರಕುಮಾರ್ ನಿವೃತ್ತ ನಿರ್ದೇಶಕರು ಇವರು ಪ್ರತಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿ ತಮ್ಮ ಮೇಲೆ ಹೂಡಿರುವ ಆರೋಪಗಳನ್ನು ನಿರಾಕರಿಸಿರುತ್ತಾರೆ. ಸರ್ಕಾರವು ಆರೋಪಿತ ಅಧಿಕಾರಿಯವರ ಪ್ರತಿ ರಕ್ಷಣಾ ಹೇಳಿಕೆಗಳನ್ನು ಒಪ್ಪದೆ ಸತ್ಯಾಸತ್ಯತೆಯನ್ನು ಪರಿಶೀಲಿಸುವ ಸಲುವಾಗಿ ಮೇಲೆ (3) ರಲ್ಲಿ ಓದಲಾದ ದಿನಾಂಕ: 17–01–2009ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲು ಶ್ರೀ ಎಂ. ಸುಬ್ಬರಾವ್, ನಿವೃತ್ತ ನ್ಯಾಯಾದೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಲಾಗಿತ್ತು. ಈ ಆರೋಪಗಳ ಬಗ್ಗೆ ಮೇಲೆ (4) ರಲ್ಲಿ ಓದಲಾದ ದಿನಾಂಕ: 15–10–2009 ರಂದು ವಿಚಾರಣಾಧಿಕಾರಿಗಳು ವಿಚಾರಣಾ ವರದಿ ಸಲ್ಲಿಸಿದ್ದು, ಸದರಿ ವಿಚಾರಣಾ ವರದಿಯಲ್ಲಿ ಸತ್ಯಾಪನಾ ಸಮಿತಿಯ ವರದಿಯು ಅಪೂರ್ಣವಾಗಿದ್ದು ಹಾಗೂ ಸಾಕ್ಷಿಗಳು ಆರೋಪಗಳ ಬಗ್ಗೆ ಸಾಕ್ಷಿ ನೀಡಿರುವುದಿಲ್ಲವೆಂಬ ಕಾರಣಕ್ಕಾಗಿ ಆರೋಪವು ಸಾಬೀತಾಗಿಲ್ಲವೆಂದು ಅಭಿಪ್ರಾಯವನ್ನು ನೀಡಿರುತ್ತಾರೆ. ಆದರೆ ವಿಚಾರಣೆಯಲ್ಲಿ ಕೆಲವು ದಾಖಲೆ ಹಾಗೂ ಸಾಕ್ಷಗಳ ಕೊರತೆಯಿಂದಾಗಿ ಈ ಆರೋಪಗಳು ಅರ್ಹತೆಯ ಆಧಾರದ ಮೇಲೆ ನಿರ್ಣಯ ಕೈಗೊಳ್ಳಲಾಗಿಲ್ಲದ್ದರಿಂದ ಇದನ್ನು ಪರಿಶೀಲಿಸಿದ ಸರ್ಕಾರವು ಮೇಲೆ ಓದಲಾದ (5) ರಲ್ಲಿ ಸದರಿ ಆರೋಪಗಳ ಕುರಿತಂತೆ ಮರು ವಿಚಾರಣೆ ಮಾಡಲು ಆದೇಶಿಸಲಾಯಿತು. ಈ ಮಧ್ಯೆ ಓದಲಾದ (6) ರ ದಿನಾಂಕ: 27–05–2010 ರಂದು ಆರೋಪಿತ ಅಧಿಕಾರಿಯವರು ಮನವಿ ಸಲ್ಲಿಸಿ, ಈಗಾಗಲೇ ವಿಚಾರಣೆ ನಡೆದು ಅಂತಿಮ ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ಇದೇ ವಿಷಯದ ಬಗ್ಗೆ ಮರು ಇಲಾಖಾ ವಿಚಾರಣೆ ನಡೆಸಲು ನಿಯಮಗಳಲ್ಲಿ ಅವಕಾಶವಿಲ್ಲವೆಂದು ತಿಳಿಸಿ ಸದರಿ ಇಲಾಖಾ ವಿಚಾರಣೆಯಿಂದ ಆರೋಪ ಮುಕ್ತರನ್ನಾಗಿಸುವಂತೆ ಮನವಿ ಕೋರಿರುತ್ತಾರೆ. ಅದರನ್ವಯ ಕಾನೂನು ಇಲಾಖೆಯ ಅಭಿಪ್ರಾಯ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳ) ವಿಭಾಗದ ಅಭಿಪ್ರಾಯವನ್ನು ಕೋರಲಾಗಿದ್ದು, ಸದರಿ ಇಲಾಖೆಗಳು ಹೊಸದಾಗಿ ವಿಚಾರಣೆ ನಡೆಸಲು ಸಿ.ಸಿ.ಎ. ನಿಯಮ 11–ಎ ರಲ್ಲಿ ಅವಕಾಶವಿರುವುದಿಲ್ಲವೆಂದು ಅಭಿಪ್ರಾಯ ನೀಡಿದ್ದು, ಸದರಿ ಅಭಿಪ್ರಾಯದಂತೆ ದಿನಾಂಕ: 15–10–2009 ರಂದು ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 06 ಇಮುವಿ 2008 ಬೆಂಗಳೂರು, ದಿನಾಂಕ : 23ನೇ ಜುಲೈ 2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಪಿ.ವೈ ರಾಜೇಂದ್ರಕುಮಾರ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಇವರನ್ನು ಈ ಪ್ರಕರಣದಲ್ಲಿ ಅವರ ವಿರುದ್ಧ ಮಾಡಲಾದ ಆರೋಪಗಳಿಂದ ಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ. ಶ್ರೀ ಪಿ.ವೈ ರಾಜೇಂದ್ರಕುಮಾರ್, ನಿವೃತ್ತ ನಿರ್ದೇಶಕರು, ಇವರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವೆಗಳು–3)

ಪಿ.ಆರ್. 1914

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಸ್.ಡಿ. ಕೆಮ್ಮನಕೇರಿ, ನಿವೃತ್ತ ಸರ್ಕಾರಿ ಅಭಿಯೋಜಕರು, 10ನೇ ತ್ವರಿತಗತಿ ನ್ಯಾಯಾಲಯ ಬೆಂಗಳೂರು ನಗರ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಸೌಲಭ್ಯಕ್ಕೆ ಪರಿಗಣಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ-11 ಸಂ: ಲಾ 15 ಪಿಪಿಇ 83, ದಿನಾಂಕ: 27-04-1984.
2. ಸರ್ಕಾರದ ಆದೇಶ ಸಂಖ್ಯೆ: ಲಾ 98 ಪಿಪಿಇ 84, ದಿನಾಂಕ: 08/14-06-1984.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 10-07-2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ-1/133/2008-09, ದಿನಾಂಕ: 19-08-2008.

**ಪ್ರಸ್ತಾವನೆ :**

ಮೇಲೆ (4)ರಲ್ಲಿ ಓದಲಾದ ದಿನಾಂಕ 19-08-2008ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರುರವರು ಮೇಲೆ (1)ರಲ್ಲಿ ಓದಲಾದ ದಿನಾಂಕ 27-01-1984ರ ಸರ್ಕಾರದ ಅಧಿಸೂಚನೆ-11ಯ ಕ್ರ.ಸಂ: 23ರ ಅನ್ವಯ ಶ್ರೀ ಎಸ್.ಡಿ. ಕೆಮ್ಮನಕೇರಿ, ನಿವೃತ್ತ ಸರ್ಕಾರಿ ಅಭಿಯೋಜಕರು, 10ನೇ ತ್ವರಿತಗತಿ ನ್ಯಾಯಾಲಯ ಬೆಂಗಳೂರು ನಗರ ಇವರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ 06-02-1984ರ ಪೂರ್ವಾಹ್ನ ಹುದ್ದೆಯ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಮೇಲೆ (2) ರಲ್ಲಿ ಓದಲಾದ ದಿನಾಂಕ 08/14-06-1984ರ ಸರ್ಕಾರದ ಆದೇಶದನ್ವಯ ಸದರಿ ನಿವೃತ್ತ ಅಧಿಕಾರಿಯ ಜನ್ಮ ದಿನಾಂಕವನ್ನು 28-03-1951 ಎಂದು ಒಪ್ಪಲಾಗಿದೆ. ಮೇಲೆ (3) ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರು 32 ವರ್ಷ 10 ತಿಂಗಳು 9 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1) ರನ್ವಯ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಸೌಲಭ್ಯಕ್ಕೆ ಅವರು ಅರ್ಹರಿದ್ದು, ಪರಿಗಣಿಸುವಂತೆ ಕೋರಿದ್ದು, ನಿಯಮಾನುಸಾರ ಶ್ರೀ ಎಸ್.ಡಿ. ಕೆಮ್ಮನಕೇರಿ ಇವರ ನಿವೃತ್ತಿ ವೇತನ ಸೌಲಭ್ಯಕ್ಕೆ ಮಾತ್ರ ಎರಡು ವರ್ಷಗಳ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಆದೇಶವನ್ನು ಹೊರಡಿಸುವಂತೆ ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 377 ಪಿಪಿಇ 2008, ಬೆಂಗಳೂರು, ದಿನಾಂಕ : 22ನೇ ಜುಲೈ 2011**

ಮೇಲಿನ ವಿವರಗಳ ಹಿನ್ನೆಲೆಯಲ್ಲಿ, ಶ್ರೀ ಎಸ್.ಡಿ. ಕೆಮ್ಮನಕೇರಿ, ನಿವೃತ್ತ ಸರ್ಕಾರಿ ಅಭಿಯೋಜಕರು, 10ನೇ ತ್ವರಿತಗತಿ ನ್ಯಾಯಾಲಯ ಬೆಂಗಳೂರು ನಗರ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ರೀತ್ಯ ಎರಡು ವರ್ಷಗಳ ಅಧಿಕ ಸೇವಾವಧಿಯನ್ನು ಅವರ ನಿವೃತ್ತಿ ವೇತನ ಸೌಲಭ್ಯಗಳಿಗೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಆಇ 696 ಸೇ-3/2011, ದಿನಾಂಕ 20-06-2011ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಕೆ. ನಿಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಬಿ)

ಪಿ.ಆರ್. 1915

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

ಸಂಖ್ಯೆ: ಒಇ 261 ಪಿಪಿಇ 2011, ಬೆಂಗಳೂರು, ದಿನಾಂಕ: 26-07-2011

**ವಿಷಯ** : ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ 2012ನೇ ವರ್ಷದಲ್ಲಿ ವಯೋ ನಿವೃತ್ತಿ ಹೊಂದಲಿರುವ ಅಧಿಕಾರಿಗಳಿಗೆ ಅನುಮತಿಯನ್ನು ನೀಡುವ ಬಗ್ಗೆ.

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ 2012ನೇ ವರ್ಷದಲ್ಲಿ ಈ ಕೆಳಕಂಡ ತಃಖ್ತೆಯ ಅಂಕಣ (2)ರಲ್ಲಿ ನಮೂದಿಸಿರುವ ಸರ್ಕಾರಿ ಅಭಿಯೋಜಕರು, ಅಪರ ಸರ್ಕಾರಿ ಅಭಿಯೋಜಕರು, ಅಭಿಯೋಗ ಉಪ ನಿರ್ದೇಶಕರು, ಸಹಾಯಕ ಅಭಿಯೋಗ ನಿರ್ದೇಶಕರು, ಸಹಾಯಕ ಸರ್ಕಾರಿ ಅಭಿಯೋಜಕರು ಮತ್ತು ಆಡಳಿತಾಧಿಕಾರಿಗಳಿಗೆ ಅಂಕಣ (4)ರಲ್ಲಿ ನಮೂದಿಸಿರುವ ದಿನಾಂಕಗಳಂದು ವಯೋನಿವೃತ್ತಿ ಹೊಂದಲು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಯ ನಿಯಮ 95ರ ಅನುಸಾರ ಅನುಮತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು, ಪದನಾಮ ಮತ್ತು ಕಛೇರಿಯ ವಿಳಾಸ | ಜನ್ಮ ದಿನಾಂಕ | ವಯೋನಿವೃತ್ತಿ ಹೊಂದಲು ಅನುಮತಿ ನೀಡಿರುವ ದಿನಾಂಕ |
|---|---|---|---|
| 1 | 2 | 3 | 4 |
| 1) | ಡಿ.ಜಿ.ಕುಲಕರ್ಣಿ, ಸರ್ಕಾರಿ ಅಭಿಯೋಜಕರು, ಪ್ರಧಾನ | 09-01-1952 | 31-01-2012 |

| | | | |
|---|---|---|---|
| | ಜಿಲ್ಲಾ ಮತ್ತು ಸತ್ರನ್ಯಾಯಾಲಯ, ಧಾರವಾಡ | | |
| 2) | ಸಿ. ಸಿದ್ದೇಗೌಡ, ಆಡಳಿತಾಧಿಕಾರಿಗಳು, ಅಭಿಯೋಗ ಉಪನಿರ್ದೇಶಕರ ಕಛೇರಿ ಮೈಸೂರು ವಿಭಾಗ, ಮೈಸೂರು | 10–01–1952 | 31–01–2012 |
| 3) | ಮಂಜುನಾಥ, ಆಡಳಿತಾಧಿಕಾರಿಗಳು, ಅಭಿಯೋಗ ಉಪನಿರ್ದೇಶಕರ ಕಛೇರಿ ಬೆಂಗಳೂರು ನಗರ ವಿಭಾಗ, ಬೆಂಗಳೂರು | 15–01–1952 | 31–01–2012 |
| 4) | ಎಂ.ಎಸ್. ವೆಂಕಟರಾಮು, ಸರ್ಕಾರಿ ಅಭಿಯೋಜಕರು, ಕಾನೂನು ಸಲಹೆಗಾರರು (ನಿಯೋಜನೆ ಮೇರೆಗೆ), ಡಿ.ಜಿ. ಮತ್ತು ಐ.ಜಿ.ಪಿ. ಕಛೇರಿ, ಬೆಂಗಳೂರು | 24–01–1952 | 31–01–2012 |
| 5) | ಎಫ್.ಎ. ನೂರ್, 3ನೇ ಅಪರ ಸರ್ಕಾರಿ ಅಭಿಯೋಜಕರು, 3ನೇ ಅಪರ ಜಿಲ್ಲಾ ಮತ್ತು ಸತ್ರನ್ಯಾಯಾಲಯ, ಗುಲ್ಬರ್ಗಾ | 14–02–1952 | 29–02–2012 |
| 6) | ಬಿ.ಎಸ್. ವಾಜಂತ್ರಿ, ಸರ್ಕಾರಿ ಅಭಿಯೋಜಕರು, (ಸ್ವತಂತ್ರ ಪ್ರಭಾರ) ತ್ವರಿತಗತಿ ನ್ಯಾಯಾಲಯ, ಜಮಖಂಡಿ | 01—04–1952 | 31–03–2012 |
| 7) | ಕೆ.ಆರ್. ಎಕ್ಸಾಂಬಿ, 1ನೇ ಅಪರ ಸರ್ಕಾರಿ ಅಭಿಯೋಜಕರು, 1ನೇ ಅಪರ ಜಿಲ್ಲಾ ಮತ್ತು ಸತ್ರನ್ಯಾಯಾಲಯ, ಬೆಳಗಾವಿ | 19–04–1952 | 30–04–2012 |
| 8) | ಕೆ.ಬಿ. ಕುಲಕರ್ಣಿ, ಅಭಿಯೋಗ ಉಪ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ, ಕಛೇರಿ, ಬೆಂಗಳೂರು | 01–05–1952 | 30–04–2012 |
| 9) | ಬಿ.ಎಸ್. ಕೂಕನಗೌಡರ್, 3ನೇ ಅಪರ ಸರ್ಕಾರಿ ಅಭಿಯೋಜಕರು, 3ನೇ ಅಪರ ಜಿಲ್ಲಾ ಮತ್ತು ಸತ್ರನ್ಯಾಯಾಲಯ (ಎಸ್.ಸಿ./ಎಸ್.ಟಿ.), ಬೆಳಗಾವಿ | 01–05–1952 | 30–04–2012 |
| 10) | ಎಸ್.ವಿ. ಪೂಜಾರಿ, ಸರ್ಕಾರಿ ಅಭಿಯೋಜಕರು ಅಭಿಯೋಗ ಉಪ ನಿರ್ದೇಶಕರು, (ನಿಯೋಜನೆ ಮೇರೆಗೆ) ಕೃಷಿ ಇಲಾಖೆ, ಬೆಂಗಳೂರು | 05–05–1952 | 31–05–2012 |
| 11) | ಎಸ್. ಪಿ. ಅಣ್ಣೇಗೌಡ, ಜಂಟಿ ಅಭಿಯೋಗ ನಿರ್ದೇಶಕರು, (ಆಡಳಿತ) ಅಭಿಯೋಗ ಮತ್ತು ಸರ್ಕಾರಿ ವಾಜ್ಯಗಳ ನಿರ್ದೇಶಕರ, ಕಛೇರಿ, ಬೆಂಗಳೂರು | 06–05–1952 | 31–05–2012 |
| 12) | ಎಂ.ಹೆಚ್. ಜಗದಾಳೆ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆಎಂ ನ್ಯಾಯಾಲಯ, ಬಾಗಲಕೋಟೆ | 01–06–1952 | 31–05–2012 |
| 13) | ಎಸ್.ಪಿ. ಕಂದಗಲ್, ಸರ್ಕಾರಿ ಅಭಿಯೋಜಕರು (ಸ್ವತಂತ್ರ ಪ್ರಭಾರ), 4ನೇ ತ್ವರಿತಗತಿ ನ್ಯಾಯಾಲಯ, ಬೆಳಗಾವಿ | 01–06–1952 | 31–05–2012 |
| 14) | ಎಂ.ಕೆ. ರುದ್ರಪ್ಪ, ಸರ್ಕಾರಿ ಅಭಿಯೋಜಕರು, 1ನೇ ಅಪರ ಸರ್ಕಾರಿ ಅಭಿಯೊಜಕರು, 1ನೇ ಅಪರ ಜಿಲ್ಲಾ ಮತ್ತು ಸತ್ರನ್ಯಾಯಾಲಯ, ತುಮಕೂರು | 02–06–1952 | 30–06–2012 |
| 15) | ಎಂ.ಎಸ್. ರಂಗರಾಜು, ಸರ್ಕಾರಿ ಅಭಿಯೋಜಕರು, 1ನೇ ಅಪರ ಸರ್ಕಾರಿ ಅಭಿಯೋಜಕರು, 1ನೇ ಅಪರ ಜಿಲ್ಲಾ ಮತ್ತು ಸತ್ರನ್ಯಾಯಾಲಯ, ಮೈಸೂರು | 08–06–1952 | 30–06–2012 |
| 16) | ಆರ್.ಆರ್. ಕುಲಕರ್ಣಿ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು | 12–06–1952 | 30–06–2012 |
| 17) | ಎನ್.ಎಂ. ಹೆಗಡೆ, ಅಪರ ಸರ್ಕಾರಿ ಅಭಿಯೋಜಕರು, ಅಪರ ಜಿಲ್ಲಾ ಮತ್ತು ಸತ್ರನ್ಯಾಯಾಲಯ, ಶಿವಮೊಗ್ಗ | 23–06–1952 | 30–06–2012 |
| 18) | ಸಿ.ಎಸ್. ಪಾಟೀಲ್, 1ನೇ ಅಪರ ಸರ್ಕಾರಿ | 25–07–1952 | 31–07–2012 |

| | | | |
|---|---|---|---|
| | ಅಭಿಯೋಜಕರು, 1ನೇ ಅಪರ ಜಿಲ್ಲಾ ಮತ್ತು ಸತ್ರನ್ಯಾಯಾಲಯ, ಧಾರವಾಡ | | |
| 19) | ಆರ್. ಎನ್. ಚಾಟೆ, ಸರ್ಕಾರಿ ಅಭಿಯೋಜಕರು, ಪ್ರಧಾನ ಜಿಲ್ಲಾ ಮತ್ತು ಸತ್ರ-ನ್ಯಾಯಾಲಯ, ಬೆಳಗಾವಿ | 21-08-1952 | 31-08-2012 |
| 20) | ಎ.ಎಸ್. ಚಾಂದಕವಟೆ, ಸರ್ಕಾರಿ ಅಭಿಯೋಜಕರು, ಪ್ರಧಾನ ಜಿಲ್ಲಾ ಮತ್ತು ಸತ್ರನ್ಯಾಯಾಲಯ, ಗುಲ್ಬರ್ಗಾ | 28-08-1952 | 31-08-2012 |
| 21) | ಆರ್.ಬಿ. ಗುಣಕಿ, ಅಪರ ಸರ್ಕಾರಿ ಅಭಿಯೋಜಕರು, ಅಪರ ಜಿಲ್ಲಾ ಮತ್ತು ಸತ್ರನ್ಯಾಯಾಲಯ, ಚಿತ್ರದುರ್ಗ | 08-10-1952 | 31-10-2012 |
| 22) | ಆರ್.ಎನ್. ಮಠ, ಸರ್ಕಾರಿ ಅಭಿ-ಯೋಜಕರು (ಸ್ವತಂತ್ರ ಪ್ರಭಾರ) 3ನೇ ತ್ವರಿತಗತಿ ನ್ಯಾಯಾಲಯ | 31-10-1952 | 31-10-2012 |
| 23) | ಬಸವನಗೌಡ, ಅಪರ ಸರ್ಕಾರಿ ಅಭಿಯೋಜಕರು, ಅಪರ ಜಿಲ್ಲಾ ಮತ್ತು ಸತ್ರನ್ಯಾಯಾಲಯ, ಹಾಸನ | 16-11-1952 | 30-11-2012 |
| 24) | ಎಫ್.ಯು. ನಾಯಿಕ್‌ವಾಡಿ, ಸರ್ಕಾರಿ ಅಭಿಯೋಜಕರು, ಪ್ರಧಾನ ಜಿಲ್ಲಾ ಮತ್ತು ಸತ್ರನ್ಯಾಯಾಲಯ, ಬಿಜಾಪುರ | 28-12-1952 | 31-12-2012 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ನಿಂಗಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಪೋಲೀಸ್ ಸೇವೆಗಳು-ಬಿ)

ಪಿ.ಆರ್. 1916

## ಶಿಕ್ಷಣ ಸಚಿವಾಲಯ

### ಸುತ್ತೋಲೆ

ಸಂಖ್ಯೆ: ಇಡಿ 82 ಟಿಪಿಯು 2010 (ಭಾಗ), ಬೆಂಗಳೂರು, ದಿನಾಂಕ: 28/29-07-2011

ಪದವಿ ಪೂರ್ವ ಶಿಕ್ಷಣ ಇಲಾಖೆಯು ರಾಜ್ಯದಲ್ಲಿ ಪ್ರಥಮ ಮತ್ತು ದ್ವಿತೀಯ ಪಿ.ಯು.ಸಿ. ಶಿಕ್ಷಣವನ್ನು ನೀಡುತ್ತಿದ್ದು, ಪದವಿ ಪೂರ್ವ ಶಿಕ್ಷಣವು ವಿದ್ಯಾರ್ಥಿಗಳ ಜೀವನದಲ್ಲಿ ಪ್ರಮುಖ ಘಟ್ಟವಾಗಿರುತ್ತದೆ. ಸರ್ಕಾರ ಮತ್ತು ಇಲಾಖೆ ನೀಡುವ ಸೂಚನೆಗೆ ಅನುಗುಣವಾಗಿ ಮತ್ತು ಬಿಡುಗಡೆ ಮಾಡುವ ಅನುದಾನವನ್ನು ಸರಿಯಾಗಿ ಉಪಯೋಗಿಸಿಕೊಳ್ಳುವ ನಿಟ್ಟಿನಲ್ಲಿ ಹಾಗೂ ಮೂಲಭೂತ ಸೌಕರ್ಯಗಳನ್ನು ಅಭಿವೃದ್ಧಿಪಡಿಸುವ ಮತ್ತು ಶೈಕ್ಷಣಿಕ ಗುಣಮಟ್ಟವನ್ನು ಕಾಪಾಡುವ ದೃಷ್ಠಿಯಿಂದ ರಾಜ್ಯದ ಎಲ್ಲಾ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಕಾಲೇಜು ಅಭಿವೃದ್ಧಿ ಸಮಿತಿಯನ್ನು ಪ್ರತಿ ವರ್ಷ ರಚಿಸಲಾಗುತ್ತದೆ. ಕಾಲೇಜು ಅಭಿವೃದ್ಧಿ ಸಮಿತಿಯ ರಚನೆ. ಕಾರ್ಯವ್ಯಾಪ್ತಿ, ಅಧಿಕಾರಗಳು/ಕರ್ತವ್ಯಗಳು ಇತ್ಯಾದಿಗಳನ್ನು ವಿಸ್ತೃತವಾಗಿ ನಿಯಂತ್ರಿಸಲು ಅನುಕೂಲವಾಗುವಂತೆ ಸಮಗ್ರ ನಿಯಮಗಳನ್ನು ರಚಿಸಲಾಗುತ್ತಿದೆ. 2011-12ನೇ ಶೈಕ್ಷಣಿಕ ಸಾಲಿನಿಂದ ನಿಯಮಗಳು ರಚನೆಯಾಗುವವರೆಗೆ ಕಾಲೇಜು ಅಭಿವೃದ್ಧಿ ಸಮಿತಿಯು ಆಬಾಧಿತವಾಗಿ ಕಾರ್ಯನಿರ್ವಹಿಸುವಂತೆ ಈ ಕೆಳಕಂಡ ಮಾರ್ಗಸೂಚಿಗಳನ್ವಯ ಕಾಲೇಜು ಅಭಿವೃದ್ಧಿ ಸಮಿತಿಯನ್ನು ರಚಿಸಿ, ಕಾರ್ಯನಿರ್ವಹಿಸಲು ಈ ಮೂಲಕ ಸೂಚಿಸಲಾಗಿದೆ.

ಅಧ್ಯಕ್ಷರು – ಆಯಾ ವಿಧಾನ ಸಭಾ ಕ್ಷೇತ್ರದ ಶಾಸಕರು ಅಥವಾ ಅವರಿಂದ ನಾಮ ನಿರ್ದೇಶಿಸಲ್ಪಟ್ಟ ವ್ಯಕ್ತಿ.

ಉಪಾಧ್ಯಕ್ಷರು – ವಿಧಾನ ಸಭಾ ಸದಸ್ಯರಿಂದ ನಾಮ ನಿರ್ದೇಶಿಸಲ್ಪಟ್ಟ ಪೋಷಕ ವರ್ಗದ ವ್ಯಕ್ತಿ.

ಸದಸ್ಯರು – 1) ಪೋಷಕ ವರ್ಗದ ಸದಸ್ಯರು-06

ಇವರಲ್ಲಿ ಎರಡು ಮಹಿಳಾ ಸದಸ್ಯರು ಮತ್ತು ಒಬ್ಬರು ಪ.ಜಾ/ಪ.ಪಂಗಡದ ಸದಸ್ಯರು ಕಡ್ಡಾಯವಾಗಿ ಇರತಕ್ಕದ್ದು.

2) ಶಿಕ್ಷಣ ಕ್ಷೇತ್ರದಲ್ಲಿ ಆಸಕ್ತಿ ಇರುವ ಒಬ್ಬ ಸದಸ್ಯರು.

3) ವಿದ್ಯಾರ್ಥಿ ಪ್ರತಿನಿಧಿಗಳು-02

ಇವರಲ್ಲಿ ಕಡ್ಡಾಯವಾಗಿ ಒಬ್ಬ ವಿದ್ಯಾರ್ಥಿನಿ ಇರತಕ್ಕದ್ದು

(ಬಾಲಕರ ಪದವಿ ಪೂರ್ವ ಕಾಲೇಜಿಗೆ ಇದು ಅನ್ವಯವಾಗುವುದಿಲ್ಲ)

4) ಸಂಯುಕ್ತ ಪದವಿ ಪೂರ್ವ ಕಾಲೇಜುಗಳಲ್ಲಿ ಉಪ ಪ್ರಾಂಶುಪಾಲರು/ಹಿರಿಯ ಶಿಕ್ಷಕರು

ಸದಸ್ಯ ಕಾರ್ಯದರ್ಶಿ- ಆಯಾ ಕಾಲೇಜಿನ ಪ್ರಾಂಶುಪಾಲರು

**ಎಸ್.ಹೆಚ್. ಕುರಿಯವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ

(ಪದವಿ ಪೂರ್ವ ಶಿಕ್ಷಣ)

ಪಿ.ಆರ್. 1917

## ಶಿಕ್ಷಣ ಸಚಿವಾಲಯ

**ವಿಷಯ :** ಶಿಕ್ಷಣ ಇಲಾಖೆಯ ವಶದಲ್ಲಿರುವ ಭಾಗಶಃ ಜಮೀನನ್ನು ಸಮಾಜ ಕಲ್ಯಾಣ ಇಲಾಖೆಯ ಶ್ರೀ ಮೊರಾರ್ಜಿ ದೇಸಾಯಿ ವಸತಿ ಶಾಲೆ ಕಟ್ಟಡ ನಿರ್ಮಿಸಲು ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :** ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಧಾರವಾಡ ರವರ ಪತ್ರ ಸಂಖ್ಯೆ: ಪಿ3/ಸ್ವೀಕೃತ ಕಟ್ಟಡ/ಮು.ದೇ.ಶಾ./70/08-09, ದಿನಾಂಕ: 21-02-2009.

**ಪ್ರಸ್ತಾವನೆ :**

1) ಮೇಲೆ ಓದಲಾದ ಪತ್ರದಲ್ಲಿ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ರವರು ಗೋಕಾಕ ತಾಲ್ಲೂಕಿನ ನಾಗನೂರ ಗ್ರಾಮದಲ್ಲಿರುವ ಸರ್ವೆ ಸಂಖ್ಯೆ: 98/02, 97/02, 98/01, 97/1ಪಿ-2, 96,95/6,95/5,95/4ರಲ್ಲಿ ಒಟ್ಟು 10 ಎಕರೆ ಜಮೀನು ಶಿಕ್ಷಣ ಇಲಾಖೆಗೆ ಸಂಬಂಧಿಸಿದ್ದು, ಅದರಲ್ಲಿ 5 ಎಕರೆ ಜಮೀನನ್ನು ಸದರಿ ಗ್ರಾಮಕ್ಕೆ ಮಂಜೂರಾಗಿರುವ ಶ್ರೀ ಮೊರಾರ್ಜಿ ದೇಸಾಯಿ ವಸತಿ ಶಾಲೆಗೆ ಕಟ್ಟಡ ನಿರ್ಮಿಣಕ್ಕಾಗಿ ಸಮಾಜ ಕಲ್ಯಾಣ ಇಲಾಖೆಗೆ ಹಸ್ತಾಂತರಿಸುವ ಬಗ್ಗೆ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 192 ಯೋಸಕ 2011 ಬೆಂಗಳೂರು, ದಿನಾಂಕ: 27-07-2011**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶದಂತೆ ಗೋಕಾಕ ತಾಲ್ಲೂಕಿನ ನಾಗನೂರ ಗ್ರಾಮದಲ್ಲಿರುವ ಶ್ರೀ ಮೊರಾರ್ಜಿ ದೇಸಾಯಿ ವಸತಿ ಶಾಲೆಗೆ ಕಟ್ಟಡ ನಿರ್ಮಾಣಕ್ಕಾಗಿ 03 ಎಕರೆ ಜಮೀನನ್ನು ಸಮಾಜ ಕಲ್ಯಾಣ ಇಲಾಖೆಗೆ ಹಸ್ತಾಂತರಿಸಲು, ಅಪರ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ರವರಿಗೆ ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಐ.ಎಫ್. ಮಾಗಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. 1918

## ಇಂಧನ ಸಚಿವಾಲಯ

**ವಿಷಯ :** ಮೆ: ಮಂಗಳಂ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಯ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 36.00 ಮೆಗಾವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಡಿಇ 48 ಎನ್‌ಸಿಇ 2002 ದಿನಾಂಕ: 20-06-2002.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 453 ಎನ್‌ಸಿಇ 2008 ದಿನಾಂಕ: 08-05-2009.
3. ಸರ್ಕಾರಿ ಪತ್ರ ಸಂಖ್ಯೆ: ಇಎನ್ 324 ಎನ್‌ಸಿಇ 2009 ದಿನಾಂಕ: 08-01-2010.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್‌ಇಡಿ/08/ MWEPL-10 MW to 36 MW/2011/956/2011 ದಿನಾಂಕ: 16/23-03-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ: ಮಂಗಳಂ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಚಿಕ್ಕಮಗಳೂರು ಜಿಲ್ಲೆಯ ಲಿಂಗದಹಳ್ಳಿ ಪ್ರದೇಶದಲ್ಲಿ ಅನುಷ್ಠಾನಗೊಳಿಸಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಯೋಜನೆ ಹಂಚಿಕೆ ಮಾಡಿ 6 ವರ್ಷಗಳು ಕಳೆದರೂ ಯೋಜನೆಯನ್ನು ಅನುಷ್ಠಾನಗೊಳಿಸದಿರುವುದರಿಂದ ಮೆ: ಮಂಗಳಂ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯ ಲಿಂಗದಹಳ್ಳಿ ಗ್ರಾಮದಲ್ಲಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಿರುವ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ರದ್ದು ಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಮೆ: ಮಂಗಳಂ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್‌ರವರಿಗೆ ಚಿಕ್ಕಮಗಳೂರು ಜಿಲ್ಲೆಯ ಲಿಂಗದಹಳ್ಳಿ ಗ್ರಾಮದಲ್ಲಿ ಹಂಚಿಕೆಯಾಗಿ ರದ್ದಾಗಿದ್ದ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ರದ್ದತಿ ಆದೇಶವನ್ನು ಹಿಂಪಡೆದು ಯೋಜನೆಯನ್ನು ಪೂರ್ವಸ್ಥಿತಿಗೆ ತಂದು, ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ಜೂನ್ 2011 ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಮೆ: ಮಂಗಳಂ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಲಿಂಗದಹಳ್ಳಿ ಪ್ರದೇಶದಲ್ಲಿ ಹಂಚಿಕೆಯಾಗಿರುವ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 10.00 ಮೆಗಾ ವ್ಯಾಟ್‌ನಿಂದ 36.00 ಮೆಗಾ ವ್ಯಾಟ್‌ಗೆ ಹೆಚ್ಚಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ:-

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 198 ಎನ್‌ಸಿಇ 2011, ಬೆಂಗಳೂರು, ದಿನಾಂಕ : 29-07-2011**

ಮೆ: ಮಂಗಳಂ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಲಿಂಗದಹಳ್ಳಿ ಪ್ರದೇಶದಲ್ಲಿ ಹಂಚಿಕೆಯಾಗಿರುವ 10.00 ಮೆಗಾ ವ್ಯಾಟ್ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 36.00 ಮೆಗಾ ವ್ಯಾಟ್‌ಗೆ ಈ ಕೆಳಗೆ ವಿವರಿಸಿದಂತೆ ಹೆಚ್ಚಿಸಿ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲವಕಾಶವನ್ನು ದಿನಾಂಕ 31–12–2011 ರವರೆಗೆ ವಿಸ್ತರಿಸಲಾಗಿದೆ.

| Geographical Area details | Sanctioned capacity in MW | Enhancement proposed in stage-1 in MW | No. of WTGs & rating in kw |
|---|---|---|---|
| North-South non contiguous ridge followed by east orientation is located on the north of lingadahalli village. The potential area is situated in the forest area and has different peaks with elevation 919, 920 & 1042 m Amsl. This area is held in the following geographical co-oridinates:<br>Latitude 13$^0$35'-13$^0$40'N<br>Longitude: 75$^0$50'-75$^0$55' E<br>Ridge peaks 919, 920, 1042 & 785 m Amsl.<br>Toposheed No 48 o/14) | 10MW | 26 MW | 36MW (18x 2000) |

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1) ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಸುರೇಶ್. ಬಿ. ಕೃಷ್ಣಪ್ಪನವರ್
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 1919

## ಸಾರ್ವಜನಿಕ ಉದ್ದಿಮೆಗಳ ಸಚಿವಾಲಯ

### ಸೇರ್ಪಡೆ

**ಸಂಖ್ಯೆ : ಸಾಉಇ 37 ಎಆರ್‌ಯು 2010 ಬೆಂಗಳೂರು, ದಿನಾಂಕ : 02–07–2011**

ಸರ್ಕಾರದ ಆದೇಶ ಸಂಖ್ಯೆ : ಡಿಪಿಇ 37 ಎಆರ್‌ಯು 2010, ದಿನಾಂಕ : 18–03–2011 ರ ಆದೇಶ ಭಾಗದಲ್ಲಿರುವ ಅನುಗ್ರಹ ಭತ್ಯೆ (Exgratia) ಯನ್ನು ರೂ. 5.00 ಲಕ್ಷಗಳಿಂದ ರೂ. 8.50 ಲಕ್ಷಗಳ ಪದಗಳ ನಂತರ "ಈ ಆದೇಶ ಹೊರಡಿಸಿದ ದಿನಾಂಕದಿಂದಲೇ ಜಾರಿಗೆ ಬರುವಂತೆ ಎಂದು" ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ. ಪಿ. ಹುಲ್ಲಿಕೇರಿ**
ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರ),
ಸಾರ್ವಜನಿಕ ಉದ್ದಿಮೆಗಳ ಇಲಾಖೆ

ಪಿ.ಆರ್. 1940

## ಕಂದಾಯ ಸಚಿವಾಲಯ

**ವಿಷಯ :** ದಾವಣಗೆರೆ ಜಿಲ್ಲೆಯ ಹರಿಹರ ವಿಧಾನ ಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ರಚಿಸುವ ಬಗ್ಗೆ.
**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ಕಂಇ 27 ಮುಸರ 2008 ದಿನಾಂಕ 08–12–2008.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ದಾವಣಗೆರೆ ಜಿಲ್ಲೆಯ ಹರಿಹರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡಂತೆ ರಚಿಸಿ ಆದೇಶಿಸಲಾಗಿರುತ್ತದೆ.

| | |
|---|---|
| 1. ಮಾನ್ಯ ವಿಧಾನಸಭಾ ಸದಸ್ಯರು, ಹರಿಹರ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2. ತಹಶೀಲ್ದಾರ್, ಹರಿಹರ ತಾಲ್ಲೂಕು. | ಸದಸ್ಯ ಕಾರ್ಯದರ್ಶಿ |
| 3. ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ದಾವಣಗೆರೆ ಜಿಲ್ಲೆ | ಸದಸ್ಯರು |
| 4. ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಹರಿಹರ ತಾಲ್ಲೂಕು | ಸದಸ್ಯರು |

| | | |
|---|---|---|
| 5. ಶ್ರೀ ಕೆ. ವಿ. ಪಂಚಾಕ್ಷರಪ್ಪ ಬಿನ್ ಕೆ. ವೀರಪ್ಪ, ಭಾನುವಳ್ಳಿ, | (ಸಾಮಾನ್ಯ) | ಸದಸ್ಯರು |
| 6. ಶ್ರೀಮತಿ ಅನುಸೂಯಮ್ಮ ಕೋಂ ಗೌಡ್ರು ಹನುಮಂತಪ್ಪ, ಚಿಕ್ಕಬಿದರಿ. | (ಮಹಿಳೆ) | ಸದಸ್ಯರು |
| 7. ಶ್ರೀ ಸುರೇಶ ತೆರೇದಾಳ, ಎ.ಕೆ. ಕಾಲೋನಿ, ಹರಿಹರ | (ಪರಿಶಿಷ್ಟ ಜಾತಿ) | ಸದಸ್ಯರು |
| 8. ಶ್ರೀ ಪರಮೇಶ್ವರಪ್ಪ ಬಿನ್ ಅಂಜನಪ್ಪ ಹಂಚಿನಮನೆ, ಕುರುಬರಹಳ್ಳಿ, | (ಪರಿಶಿಷ್ಟ ಪಂಗಡ) | ಸದಸ್ಯರು |

ಈ ಸಮಿತಿಯಲ್ಲಿ ನಾಮ ನಿರ್ದೇಶನ ಮಾಡಲಾದ ಅಧಿಕಾರೇತರ ಸದಸ್ಯರನ್ನು ರದ್ದುಪಡಿಸಿ, ಕೆಳಕಂಡ ಅಧಿಕಾರೇತರ ಸದಸ್ಯರನ್ನು ನಾಮ ನಿರ್ದೇಶನ ಮಾಡಲು ಸರ್ಕಾರವು ತೀರ್ಮಾನಿಸಿದೆ.

| | | |
|---|---|---|
| 1. ಶ್ರೀ ಯು. ಬಸವರಾಜಪ್ಪ ಬಿನ್ ನಾಗಪ್ಪ, ಹಾಲಿವಾಣ ಗ್ರಾಮ, ಹರಿಹರ ತಾಲ್ಲೂಕು | (ಸಾಮಾನ್ಯ) | ಸದಸ್ಯರು |
| 2. ಶ್ರೀಮತಿ ಪಾರ್ವತಮ್ಮ ಕೋಂ ಯು. ಎನ್. ಶಿವನಗೌಡ, ಹಳ್ಳಿಹಾಳು ಗ್ರಾಮ ಹರಿಹರ ತಾಲ್ಲೂಕು | (ಮಹಿಳೆ) | ಸದಸ್ಯರು |
| 3. ಶ್ರೀ ಬಸವರಾಜಪ್ಪ ಎಂ. ಬಿ. ಬಿನ್ ತಿರುಕಪ್ಪ, ಹರ್ಲಾಪುರ ಗ್ರಾಮ, ಹರಿಹರ ತಾಲ್ಲೂಕು | (ಪರಿಶಿಷ್ಟ ಜಾತಿ) | ಸದಸ್ಯರು |
| 4. ಶ್ರೀ ಅಶೋಕ ಬಿನ್ ನಾಗಪ್ಪ, ಕೆ.ಎಸ್. ಹಳ್ಳಿ, ಹರಿಹರ ತಾಲ್ಲೂಕು. | (ಪರಿಶಿಷ್ಟ ಪಂಗಡ) | ಸದಸ್ಯರು |

ಅದರಂತೆ, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 27 ಮುಸರ 2008 ಬೆಂಗಳೂರು, ದಿನಾಂಕ : 23–07–2011**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಾವಣಗೆರೆ ಜಿಲ್ಲೆಯ ಹರಿಹರ ವಿಧಾನಸಭಾ ಕ್ಷೇತ್ರದ ಆರಾಧನಾ ಯೋಜನೆಯ ಅನುಷ್ಠಾನಕ್ಕಾಗಿ ಈ ಕೆಳಕಂಡಂತೆ ಆರಾಧನಾ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಪುನರ್ ರಚಿಸಿ ಸರ್ಕಾರವು ಆದೇಶಿಸಿದೆ.

| | | |
|---|---|---|
| 1. ಮಾನ್ಯ ವಿಧಾನಸಭಾ ಸದಸ್ಯರು, ಹರಿಹರ ವಿಧಾನಸಭಾ ಕ್ಷೇತ್ರ | | ಅಧ್ಯಕ್ಷರು |
| 2. ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ದಾವಣಗೆರೆ ಜಿಲ್ಲೆ. | | ಸದಸ್ಯರು |
| 3. ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್ ಹರಿಹರ ತಾಲ್ಲೂಕು. | | ಸದಸ್ಯರು |
| 4. ಶ್ರೀ ಯು. ಬಸವರಾಜಪ್ಪ, ಬಿನ್ ನಾಗಪ್ಪ, ಹಾಲಿವಾಣ ಗ್ರಾಮ, ಹರಿಹರ ತಾಲ್ಲೂಕು | (ಸಾಮಾನ್ಯ) | ಸದಸ್ಯರು |
| 5. ಶ್ರೀಮತಿ ಪಾರ್ವತಮ್ಮ ಕೋಂ ಯು. ಎನ್. ಶಿವನಗೌಡ, ಹಳ್ಳಿಹಾಳು ಗ್ರಾಮ, ಹರಿಹರ ತಾಲ್ಲೂಕು | (ಮಹಿಳೆ) | ಸದಸ್ಯರು |
| 6. ಶ್ರೀ ಬಸವರಾಜಪ್ಪ ಎಂ. ಬಿ. ಬಿನ್ ತಿರುಕಪ್ಪ, ಹರ್ಲಾಪುರ ಗ್ರಾಮ, ಹರಿಹರ ತಾಲ್ಲೂಕು. | (ಪರಿಶಿಷ್ಟ ಜಾತಿ) | ಸದಸ್ಯರು |
| 7. ಶ್ರೀ ಅಶೋಕ ಬಿನ್ ನಾಗಪ್ಪ, ಕೆ. ಎಸ್. ಹಳ್ಳಿ, ಹರಿಹರ ತಾಲ್ಲೂಕು. | (ಪರಿಶಿಷ್ಟ ಪಂಗಡ) | ಸದಸ್ಯರು |
| 8. ತಹಶೀಲ್ದಾರ್, ಹರಿಹರ ತಾಲ್ಲೂಕು, ಹರಿಹರ. | | ಸದಸ್ಯ ಕಾರ್ಯದರ್ಶಿ |

ಈ ಸಮಿತಿಯ ಅವಧಿ 5 (ಐದು) ವರ್ಷಗಳು ಅಥವಾ ಸರ್ಕಾರವು ಮುಂದಿನ ಆದೇಶ ಹೊರಡಿಸುವವರೆಗೆ; ಇವರೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ಥಿತ್ವದಲ್ಲಿರುತ್ತದೆ.

ಈ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ : 03–02–2001 ರಲ್ಲಿ ಹೊರಡಿಸಿದ ನಿಯಮಗಳನ್ವಯ ಹಾಗೂ ಸದರಿ ನಿಯಮಗಳಲ್ಲಿ ಸೂಚಿಸಿರುವ ಷರತ್ತುಗಳಿಗೆ ಬದ್ಧವಾಗಿ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1942

**ಕೆ. ಉಮಾಪತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆಯ ವಿಜಯನಗರ ವಿಧಾನ ಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ಕಂಇ 59 ಮುಸರ 2009, ದಿನಾಂಕ 25–02–2009.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ಬಳ್ಳಾರಿ ಜಿಲ್ಲೆಯ ವಿಜಯನಗರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡಂತೆ ರಚಿಸಿ ಆದೇಶಿಸಲಾಗಿರುತ್ತದೆ.

| | |
|---|---|
| 1. ಮಾನ್ಯ ವಿಧಾನಸಭಾ ಸದಸ್ಯರು, ವಿಜಯನಗರ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2. ತಹಶೀಲ್ದಾರ್, ವಿಜಯನಗರ ತಾಲ್ಲೂಕು. | ಸದಸ್ಯ ಕಾರ್ಯದರ್ಶಿ |
| 3. ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಬಳ್ಳಾರಿ ಜಿಲ್ಲೆ. | ಸದಸ್ಯರು |
| 4. ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ವಿಜಯನಗರ ತಾಲ್ಲೂಕು. | ಸದಸ್ಯರು |

ಮುಂದುವರೆದು, ಈ ಆದೇಶದಲ್ಲಿ ಅಧಿಕಾರೇತರ ನಾಲ್ಕು ಜನ ಸದಸ್ಯರ ನಾಮ ನಿರ್ದೇಶನ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದೆಂದು ತಿಳಿಸಲಾಗಿತ್ತು.

ಅದರಂತೆ, ಸರ್ಕಾರವು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 59 ಮುಸರ 2009, ಬೆಂಗಳೂರು, ದಿನಾಂಕ : 23–07–2011**

ಈಗಾಗಲೇ ರಚಿಸಲಾದ ಬಳ್ಳಾರಿ ಜಿಲ್ಲೆಯ ವಿಜಯನಗರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡಂತೆ ಅಧಿಕಾರೇತರ ಸದಸ್ಯರನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನಗೊಳಿಸಿ ಸರ್ಕಾರವು ಆದೇಶಿಸಿದೆ.

| | |
|---|---|
| 1. ಶ್ರೀ ಗೋವಿಂದರಾಜು ಬಿನ್ ಚಾಗಪ್ಪ, ಹಂಪಿ, ಹೊಸಪೇಟೆ, ಬಳ್ಳಾರಿ ಜಿಲ್ಲೆ. (ಸಾಮಾನ್ಯ) | ಸದಸ್ಯರು |
| 2. ಶ್ರೀಮತಿ ಗಂಗಮ್ಮ ಕೋಂ ಕುಮಾರಸ್ವಾಮಿ, ಪಟೇಲ್ ನಗರ, ಹೊಸಪೇಟೆ, ಬಳ್ಳಾರಿ ಜಿಲ್ಲೆ. (ಮಹಿಳೆ) | ಸದಸ್ಯರು |
| 3. ಶ್ರೀ ಬಸವರಾಜ ಬಿನ್ ಅಂಜಿನಪ್ಪ, ವಾರ್ಡ್ ನಂ. 11, ವರಕೇರಿ, ಚಿತ್ತಾವಾಡ್ಗಿ, ಹೊಸಪೇಟೆ ಬಳ್ಳಾರಿ ಜಿಲ್ಲೆ. (ಪರಿಶಿಷ್ಟ ಜಾತಿ) | ಸದಸ್ಯರು |
| 4. ಶ್ರೀ ಹೊನ್ನೂರಪ್ಪ ಬಿನ್ ಹನುಮಂತಪ್ಪ, ಬೈಲುವುದ್ದಿಗೇರಿ ಗ್ರಾಮ, ಹೊಸಪೇಟೆ, ಬಳ್ಳಾರಿ ಜಿಲ್ಲೆ. (ಪರಿಶಿಷ್ಟ ಪಂಗಡ) | ಸದಸ್ಯರು |

ಈ ಸಮಿತಿಯ ಅವಧಿ 5 (ಐದು) ವರ್ಷಗಳು ಅಥವಾ ಸರ್ಕಾರವು ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಈ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್ಎ 2000, ದಿನಾಂಕ : 03–02–2001 ರಲ್ಲಿ ಹೊರಡಿಸಿದ ನಿಯಮಗಳನ್ವಯ ಹಾಗೂ ಸದರಿ ನಿಯಮಗಳಲ್ಲಿ ಸೂಚಿಸಿರುವ ಷರತ್ತುಗಳಿಗೆ ಬದ್ಧವಾಗಿ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1943

**ಕೆ. ಉಮಾಪತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

## ENERGY SECRETARIAT

**Sub :** Enhancement of Mini Hydel Power Plant capacity from 0.5 MW to 2.00 MW of M/s Zen Power India Private Limited-reg.

**Read :** 1. Government Order No. EN 261 NCE 2009 dated 15-01-2010.
2. Letter No. KREDL/06/SH-355/Paschimvahini MHS/2028 dated 12-07-2011 received from the Managing Director, Karnataka Renewable Energy Development Limited, Bangalore.

**Preamble:**

In the Government order read at (1) above, sanction has been accorded for allotment of 0.5 MW capacity Paschimvahini Mini Hydel Scheme across paschimvahini steram at Paschimvahini, Srirangapatna Taluk, Mandya district in favour of M/s Zen Power India Private Limited.

In the letter read at (2) above, the Managing Director, Karnataka Renewable Energy Development Limited, Bangalore, has recommended to Government for enhancement of capacity of Paschimvahini, Mini Hydel scheme from 0.5 MW to 2.00 MW Paschimvahini stream at Paschimvahini, Srirangapatna Taluk, Mandya District in favour of M/s Zen Power India Private.

The proposal has been examined in detail and hence the following order :-

**Government Order No. EN 306 NCE 2011, Bangalore, Dated 29th July 2011.**

Government accords approval for enhancement of Paschimvahini Mini Hydel scheme from 0.5 MW to 2.00 MW Paschimvahini stream at paschimvahini, Srirangapatna Taluk, Mandya District in favour of M/s Zen Power India Private as detailed below :

The Government reserves the right to Cancel/modify this Order.

The other terms and conditions of the allotment Order read at (1) above shall continue as it is.

By Order and in the name of the Governor of Karnataka,

PR. 1944

**Suresh.B.Krishnappanavar**
Under Secretary to Government,
Energy Department